# ‘ಜಿ. ಎಚ್. ನಾಯಕರ ವಿಮರ್ಶೆ: ತಾತ್ವಿಕ ನೆಲೆಗಳು’

(ಎಂ. ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುವ ಕಿರುಪ್ರಬಂಧ)



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬



೨೦೧೦

# 'ಜಿ. ಎಚ್. ನಾಯಕರ ವಿಮರ್ಶೆ: ತಾತ್ವಿಕ ನೆಲೆಗಳು'

(ಎಂ. ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುವ ಕಿರುಪ್ರಬಂಧ)



ಸಂಶೋಧಕರು - ಗುರುಸ್ವಾಮಿ.
ಮಾರ್ಗದರ್ಶಕರು - ಡಾ. ರಹಮತ್ ತರೀಕೆರೆ.




ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬

೨೦೦೯ - ೨೦೧೦



797A

## ಪರಿವಿಡಿ

ಅಧ್ಯಾಯ: ೧.

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

## ೧.೧. ಪೀಠಿಕೆ

ಸಾಹಿತ್ಯ ವಿಮರ್ಶೆ, ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಇಪ್ಪತ್ತನೆಯ ಶತಮಾನದ ಎರಡನೆಯ ದಶಕದಲ್ಲಿ ಬೆಳಕು ಕಂಡಿತು. ೧೯೧೧ರಲ್ಲಿ ಬಿ.ಎಂ.ಶ್ರೀಯವರು 'ಕನ್ನಡ ಮಾತು ತಲೆ ಎತ್ತುವ ಬಗೆ' ಎಂಬ ವಿಷಯ ಕುರಿತು ಧಾರವಾಡ ವಿದ್ಯಾವರ್ಧಕ ಸಂಘದಲ್ಲಿ ಭಾಷಣ ಮಾಡಿದರು. ಅಲ್ಲಿಂದಲೇ ಕನ್ನಡ ವಿಮರ್ಶೆಯ ಮೊದಲ ಹೆಜ್ಜೆಯನ್ನು ಗುರುತಿಸಬಹುದು. ಸಾಹಿತ್ಯ ಚರಿತ್ರೆಯ ಹಾದಿಯಲ್ಲಿ ಕಾಲ ಸಂದರ್ಭಕ್ಕೆ ತಕ್ಕ ಹಾಗೆ ಸಾಹಿತ್ಯ ಪ್ರಕಾರಗಳು ಬದಲಾವಣೆಗೊಂಡು ಅಭಿವ್ಯಕ್ತವಾದ ಹಾಗೆಯೇ ಕನ್ನಡ ವಿಮರ್ಶೆಯೂ ಸಹ ರೂಪು ತಾಳಿದೆ.

ಕಾವ್ಯಮೀಮಾಂಸೆ ಮತ್ತು ಅಲಂಕಾರಗಳ ನೆಲೆಯಿಂದಲೇ ಕಾವ್ಯ ಸೌಂದರ್ಯವನ್ನು ವಿವರಿಸುತ್ತಿದ್ದ ಭಾರತೀಯ ಮತ್ತು ಕನ್ನಡ ಕಾವ್ಯ ಪರಂಪರೆಗೆ ಇಂಗ್ಲಿಷ್ ಸಾಹಿತ್ಯ ಪ್ರಭಾವದಿಂದ ಕನ್ನಡ ಸಾಹಿತ್ಯ-ಸಂಸ್ಕೃತಿಯನ್ನು ಬೆಳಗಿಸಿದ ಪರಂಪರೆ ಕನ್ನಡಕ್ಕಿದೆ. ಮೊದಲೇ ಹೇಳಿದ ಹಾಗೆ ಬಿ.ಎಂ. ಶ್ರೀಕಂಠಯ್ಯನವರೇ ಈ ಪರಂಪರೆಯ ಪ್ರಥಮರು. ಡಿ.ವಿ. ಗುಂಡಪ್ಪ, ಪ್ರೊ.ಎಸ್.ವಿ.ರಂಗಣ್ಣ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎ.ಎನ್.ಮೂರ್ತಿರಾವ್, ಎಸ್.ಅನಂತನಾರಾಯಣ, ವಿ.ಕೃ. ಗೋಕಾಕ್, ಕೀರ್ತಿನಾಥ ಕುರ್ತಕೋಟಿ, ಗೋಪಾಲಕೃಷ್ಣ ಅಡಿಗ, ಶಾಂತಿನಾಥ ದೇಸಾಯಿ, ಎಂ.ಜಿ.ಕೃಷ್ಣಮೂರ್ತಿ, ಯು.ಆರ್.ಅನಂತಮೂರ್ತಿ, ಜಿ.ಎಚ್.ನಾಯಕ, ಕೆ.ವಿ. ನಾರಾಯಣ, ಎಚ್.ಎಸ್.ರಾಘವೇಂದ್ರ ರಾವ್, ಜಿ.ಎಸ್.ಆಮೂರ, ಗಿರಡ್ಡಿ ಗೋವಿಂದರಾಜ, ಸಿ.ಎನ್.ರಾಮಚಂದ್ರನ್, ಬರಗೂರು ರಾಮಚಂದ್ರಪ್ಪ, ರಾಜೇಂದ್ರ ಚೆನ್ನಿ –ಈ ಪ್ರಾತಿನಿಧಿಕ ವಿಮರ್ಶಕರು ಕನ್ನಡ ವಿಮರ್ಶೆಯನ್ನು ಬೆಳೆಸಿದರು.

ಸಾಹಿತ್ಯ ಕೃತಿಯೊಂದರ ಮೇಲಿನ ನಿರ್ಣಯಗಳು ಕಾಲದಿಂದ ಕಾಲಕ್ಕೆ, ದೇಶದಿಂದ ದೇಶಕ್ಕೆ ಭಿನ್ನವಾಗಿರುತ್ತವೆ. ಮತ್ತು ಒಮ್ಮೆ ಕೈಗೊಂಡ ಮೌಲ್ಯಮಾಪನವು ತನ್ನ ನಿರ್ಧಾರವನ್ನು ಬದಲಾಯಿಸುವ ಸಾಧ್ಯತೆ ಇರುತ್ತದೆ. ಹಾಗೆಯೇ ಬದಲಾಯಿಸಿಕೊಂಡು ಮತ್ತೊಮ್ಮೆ ಮೌಲ್ಯಮಾಪನ ಮಾಡಿ ನಿರ್ಣಯವನ್ನು ಕೈಗೊಳ್ಳಲು ಸಾಧ್ಯವಿರುತ್ತದೆ. ಪ್ರಾಚೀನ ಸಾಹಿತ್ಯದಿಂದಲೂ ಒಂದೇ ತೆರನಾದ ಮಾರ್ಗವಾಗಲಿ ಮತ್ತು ವಿಮರ್ಶಾವಾಹಿನಿಯಾಗಲಿ ಹರಿದುಬಂದಿಲ್ಲ. ಅನೇಕ ಕವಲುಗಳಲ್ಲಿ ವಿಮರ್ಶೆ ತನ್ನ ಹರವನ್ನು ಚಾಚಿಕೊಂಡಿದೆ. ಆದರೆ "ಇದಿಷ್ಟೇ ವಿಮರ್ಶೆಯೆಂದು, ಇದಿಷ್ಟೇ ಆ ಕೃತಿ ಮೌಲ್ಯ ಅದರ ಆಚೆ ಏನೂ ಇಲ್ಲ". ಎಂದು ಗೆರೆಕೊರೆದು ಹೇಳಲು ಸಾಧ್ಯವಿಲ್ಲ. ಹೀಗೆ ಮೌಲ್ಯೀಕರಿಸಿ ಹೇಳುವ ವಿಮರ್ಶಕರು ಬಹಳ ಕಡಿಮೆ. ಇದು ಕನ್ನಡ ಸಾಹಿತ್ಯ ವಿಮರ್ಶಾ ಪರಂಪರೆಯಲ್ಲಿ ಕಾಣಬಹುದಾದ ಮಹತ್ತರವಾದ ತಾತ್ವಿಕ ನಿಲುವು.

ಕನ್ನಡ ವಿಮರ್ಶೆಯು ಅನೇಕ ಸಾಂಸ್ಕೃತಿಕ ಇಕ್ಕಟ್ಟು-ಬಿಕ್ಕಟ್ಟುಗಳನ್ನು ಎದುರಿಸುತ್ತಾ ಬೆಳೆದುಬಂದಿದೆ. ಭಿನ್ನಭಿನ್ನವಾದ ಸಾಂಸ್ಕೃತಿಕ ಚಿಂತನೆಗಳು ಮುಖಾಮುಖಿಯಾದಾಗ ಸ್ಥಾವರವಾಗಿ ನಿಲ್ಲದೆ ಜಂಗಮ ಸ್ವರೂಪಿಯಾಗಿ ಹರಿಯುತ್ತಾ ಬಂದಿದೆ. ಕನ್ನಡ ವಿಮರ್ಶೆ ಹೊಸ ಸಂದರ್ಭಕ್ಕೆ ಅನುಗುಣವಾದ ತಾತ್ವಿಕ ನೆಲೆ ಮತ್ತು ಸ್ವರೂಪವನ್ನು ಕಂಡುಕೊಳ್ಳುವುದಕ್ಕೆ ಪಶ್ಚಿಮ ವಿಚಾರಧಾರೆಗಳು ಮತ್ತು ವಿದ್ಯಾಭ್ಯಾಸ ಪ್ರಭಾವಿಸಿವೆ. ಜೊತೆಗೆ ಭಾರತೀಯ ಕಾವ್ಯಮೀಮಾಂಸೆಯು ಕೂಡ ವಿಮರ್ಶೆಗೆ ತನ್ನ ಪ್ರೇರಣೆ ನೀಡಿರುವುದು ಕೂಡ ಸಿಕ್ಕುತ್ತದೆ.

ನವೋದಯ ಪೂರ್ವದಲ್ಲಿ ಶೋಧ, ಸಂಗ್ರಹ ಕಾರ್ಯದ ಜೊತೆಗೆ ಮುನ್ನುಡಿ ರೂಪದ ಬರಹಗಳಿಗೆ ಮಹತ್ವಕೊಡಲಾಯಿತು. ನವೋದಯ ಕಾಲಘಟ್ಟದಲ್ಲಿ ಕವಿಕೇಂದ್ರಿತ ವಿಮರ್ಶೆಯ ತತ್ವಗಳು, ರಸಪರವಾದ ಮತ್ತು ವರ್ಣನಾತ್ಮಕ ದೃಷ್ಟಿಕೋನಗಳಿಂದ ವಿಮರ್ಶೆಯು ಮತ್ತೊಂದು ರೂಪತಾಳಿತು. ನವ್ಯ ವಿಮರ್ಶೆಯಲ್ಲಿ ಕೃತಿಕೇಂದ್ರಿತ ವಿಮರ್ಶೆಯ ತತ್ವಗಳು, ಕೃತಿಯ ರಚನೆ-ಬಂಧ-ತಂತ್ರ, ಅರ್ಥಕ್ಕೆ ಮಾತ್ರ ಮಹತ್ವಕೊಟ್ಟು ಚರ್ಚಿಸಲಾಯಿತು. ಓದುಗ ಕೇಂದ್ರಿತ ವಿಮರ್ಶೆಯ ತತ್ವಗಳು ಹಾಗೂ ನವ್ಯೋತ್ತರ ಸಂದರ್ಭದಲ್ಲಿ ಸಮಾಜ ಕೇಂದ್ರಿತ ವಿಮರ್ಶೆ ತತ್ವಗಳು ಪ್ರಗತಿಶೀಲ ಮತ್ತು ಬಂಡಾಯ ಸಾಹಿತ್ಯದಲ್ಲಿ ಚರ್ಚಿತವಾದವು. ಈ ಸಾಹಿತ್ಯ ವಿಮರ್ಶಾ ಚಳುವಳಿಯ ಇತಿಹಾಸಕ್ಕೆ ಅಧ್ಯಯನದ ವಿವರಣೆ ಮತ್ತು ವಿಶ್ಲೇಷಣೆಯನ್ನು ಮೀಸಲಿಡದೆ ಈ ನಾಲ್ಕು ವಿಮರ್ಶಾ ತತ್ವಗಳಲ್ಲಿ ನವ್ಯ ವಿಮರ್ಶೆಯ ಮಾದರಿಯು ವಿಭಿನ್ನವಾದ ಕಾರಣದಿಂದ ಗಮನ ಸೆಳೆಯಿತು. ಕಾವ್ಯ, ಕಥೆ, ಕಾದಂಬರಿ, ನಾಟಕಗಳನ್ನು ಬಿಡಿಸುವ, ಒಡೆದು ನೋಡುವ ಕ್ರಮ ಗಣಿತ ಶಾಸ್ತ್ರದ "ಪ್ರಮೇಯ"ದಂತೆಯೇ ತಾಂತ್ರಿಕ ಸ್ವರೂಪದ್ದು ಎನ್ನುವ ಕಾರಣದಿಂದ ನವ್ಯ ಸಾಹಿತ್ಯದ ಕಡೆಗೆ ಅಧ್ಯಯನದ ಒಲವನ್ನು ತೋರಿಸಲಾಯಿತು.

ಕನ್ನಡ ವಿಮರ್ಶಾ ಪರಂಪರೆಯಲ್ಲಿ ನವ್ಯ ಸಾಹಿತ್ಯ ವಿಮರ್ಶೆಯು ತಾರ್ಕಿಕ ಸ್ವರೂಪದಿಂದ ಕೂಡಿದ್ದಾಗಿದೆ. ಕನ್ನಡ ನವ್ಯ ಸಾಹಿತ್ಯ ವಿಮರ್ಶೆಯಲ್ಲಿ ೧೯೬೦ರಿಂದ ೧೯೮೦ರ ನಡುವಿನ ಕಾಲಾವಧಿಯಲ್ಲಿ ಯು.ಆರ್. ಅನಂತಮೂರ್ತಿ, ಎಂ.ಜಿ.ಕೃಷ್ಣಮೂರ್ತಿ, ಜಿ.ಎಚ್. ನಾಯಕ, ಹಾಗೂ ಎಚ್.ಎಂ.ಚನ್ನಯ್ಯ ಬಹುಮುಖ್ಯ ವಿಮರ್ಶಕರಾಗಿ ಹೊಮ್ಮಿದರು. ಯು.ಆರ್.ಅನಂತಮೂರ್ತಿಯವರು ಸಾಂಸ್ಕೃತಿಕ ಆವಶ್ಯಕತೆಯನ್ನು, ಎಂ.ಜಿ. ಕೃಷ್ಣಮೂರ್ತಿಯವರು ಕೃತಿನಿಷ್ಠತೆಯನ್ನು ತಮ್ಮ ವಿಮರ್ಶೆಯಲ್ಲಿ ಒಳಗು ಮಾಡಿಕೊಳ್ಳುತ್ತಾರೆ. ಆದರೆ ಜಿ.ಎಚ್.ನಾಯಕರು ವಿಮರ್ಶೆಯಲ್ಲಿ ಕೃತಿನಿಷ್ಠತೆ ಮತ್ತು ಸಂಸ್ಕೃತಿನಿಷ್ಠತೆಯ ಜೊತೆಗೆ ಮೌಲ್ಯಮಾಪನ ಜವಾಬ್ದಾರಿಯುಳ್ಳದೆಂದು ಭಾವಿಸುತ್ತಾರೆ. ಜಿ.ಎಚ್.ನಾಯಕರು ಪ್ರತಿನಿಧಿಸುವ ವಿಮರ್ಶಾ ವಿಧಾನ 'ರೂಪನಿಷ್ಠ'ವಾಗಿದ್ದು (Farmalism).

'ನವ್ಯ ವಿಮರ್ಶೆ' ಎಂದರೆ  ಇದು ಅಮೇರಿಕಾದ ನ್ಯೂ ಕ್ರಿಟಿಸಿಸಮ್ (New Critisiusm) ಗೆ ಸಂವಾದಿಯಾಗಿ ಬಂದಿದೆ. ಇಲ್ಲಿ 'ನವ್ಯ ವಿಮರ್ಶೆ' ಬ್ರಿಟನ್, ರಷ್ಯನ್ ರೂಪನಿಷ್ಠೆಯಿಂದಲೂ ಅಮೇರಿಕಾದ ನವ್ಯ ವಿಮರ್ಶೆಯಿಂದಲೂ ಬಂದಿರುವ ಪದ. ಆದ್ದರಿಂದ ಕನ್ನಡದಲ್ಲೂ 'ನವ್ಯ ವಿಮರ್ಶೆ' ಎಂಬ ಪದವೇ ಬಳಕೆಗೆ ಬಂದಿದೆ.

ನವ್ಯ ವಿಮರ್ಶೆಯ ಸಂದರ್ಭದಲ್ಲಿ ಜಿ.ಎಚ್. ನಾಯಕರು ಅಗ್ರಪಂಕ್ತಿಯಲ್ಲಿ ನಿಲ್ಲುತ್ತಾರೆ. ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿ ವಿಮರ್ಶನ ಪ್ರಜ್ಞೆ, ಶಿಸ್ತು, ಸಾಹಿತ್ಯನಿಷ್ಠೆ, ತಾತ್ವಿಕ ಕಲ್ಪನೆಗಳಿಂದ ತನ್ನ ಸ್ಥಾನವನ್ನು ಅವರು ಭದ್ರಪಡಿಸಿಕೊಂಡರು. ಇವರಿಗೆ ವಿಮರ್ಶೆ ಎನ್ನುವುದು. ಕೃತಿಯೊಂದರ ತಿರುಳನ್ನು ಬಿಡಿಸಿ ಬಿಡಿಸಿ ಮೌಲ್ಯವನ್ನು ತಿಳಿಯುವುದಾಗಿದೆ.

ನವ್ಯ ವಿಮರ್ಶೆಯ ಪ್ರಮುಖರಾದ ಜಿ.ಎಚ್. ನಾಯಕರ ವಿಮರ್ಶೆಯನ್ನು ಈ ಪ್ರಬಂಧದಲ್ಲಿ ಪರಿಶೀಲಿಸುವುದಕ್ಕೆ ಪ್ರಯತ್ನಿಸಲಾಗಿದೆ. ಜಿ.ಎಚ್.ನಾಯಕರ ವಿಮರ್ಶೆಯನ್ನು ಪುನರ್ ವಿಮರ್ಶೆಗೊಳಿಸುವುದು ಇಲ್ಲಿನ ಉದ್ದೇಶವಲ್ಲ. ಬದಲಿಗೆ ಅವರು ಅನುಸರಿಸಿದ ವಿಮರ್ಶಾ ಮಾದರಿಯನ್ನು ಹಾಗೂ ಅದರ ತಾತ್ವಿಕ ನಿಲುವುಗಳನ್ನು ಅಧ್ಯಯನಕ್ಕೆ ಒಳಪಡಿಸುವುದಾಗಿದೆ.

ಜಿ. ಎಚ್. ನಾಯಕರನ್ನು ಅಮೇರಿಕನ್ 'ನವ್ಯ ವಿಮರ್ಶೆ'ಯ ರೂಪನಿಷ್ಠ ವಿಧಾನ ಪ್ರಭಾವಿಸಿತು. ನವ್ಯ ವಿಮರ್ಶೆ/ರೂಪನಿಷ್ಠೆ ವಿಮರ್ಶೆ ಎಂದರೇನು? ಎಂಬುದರ ಬಗೆಗೆ ಚರ್ಚೆಯನ್ನು ವಿಶ್ಲೇಷಣಾತ್ಮಕವಾಗಿ ಮುಂದೆ ಅಧ್ಯಯನದಲ್ಲಿ ಹೇಳಲು ಪ್ರಯತ್ನಿಸಲಾಗಿದೆ.

## ೧.೨ ಅಧ್ಯಯನದ ಉದ್ದೇಶ

ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ವೈಜ್ಞಾನಿಕ ಶಿಸ್ತು ಮತ್ತು ವ್ಯಕ್ತಿ ನಿರಪೇಕ್ಷ ಗುಣವನ್ನು ದೊರಕಿಸಿಕೊಟ್ಟಿದ್ದು ಹಾಗೂ ಅಪೂರ್ವವಾದ ಒಳನೋಟಗಳು ಮತ್ತು ಆಯಾಮಗಳನ್ನು ಸಾಹಿತ್ಯ ಮತ್ತು ವಿಮರ್ಶೆ ಇವೆರಡಕ್ಕೂ ಕೊಟ್ಟಿದ್ದು 'ರೂಪನಿಷ್ಠೆ' ವಿಮರ್ಶೆ. ಪಾಶ್ಚಾತ್ಯ ರೂಪನಿಷ್ಠ ವಿಮರ್ಶೆಯ ತಾತ್ವಿಕ ತಳಹದಿಯನ್ನು ಅನೇಕ ವಿದ್ವಾಂಸರು ಕನ್ನಡದಲ್ಲಿ ರೂಪಿಸಿದರು. ಜಿ. ಹೆಚ್. ನಾಯಕರಲ್ಲೂ ಪಾಶ್ಚಾತ್ಯ 'ರೂಪನಿಷ್ಠೆ'ಯ ಅನೇಕ ಅನುಕರಣೆಗಳು ಇವೆಯೇ ಹಾಗೂ ಅನುಕರಣೆ ಯಥಾವತಾದ್ದೆ ಎಂಬುದನ್ನು ಅಧ್ಯಯನಕ್ಕೆ ಇನ್ನೂ ಒಳಪಡಿಸಬೇಕಾಗಿದೆ.

ಉದ್ದೇಶಗಳು:

- ಜಿ. ಎಚ್. ನಾಯಕರ ವಿಮರ್ಶಾ ಮಾದರಿಯನ್ನು ವಿಶ್ಲೇಷಿಸುವುದು.

- ಜಿ.ಎಚ್. ನಾಯಕರು ವಿಮರ್ಶಾ ಸಂಕಲನಗಳಲ್ಲಿ ರೂಪಿಸಿಕೊಂಡಿರುವ 'ನವ್ಯ ವಿಮರ್ಶಾ' ನಿಲುವುಗಳನ್ನು ಅನ್ವೇಷಿಸುವುದು ಮತ್ತು ವಿಶ್ಲೇಷಿಸುವುದು.
- ಇವರ ವಿಮರ್ಶೆಯ 'ಗ್ರಥನ ಕೌಶಲ'ವನ್ನು ಪತ್ತೆಹಚ್ಚುವುದು.
- ಪಾಶ್ಚಾತ್ಯ ವಿಮರ್ಶಾ ಮಾದರಿಗಳೊಂದಿಗೆ ಜಿ.ಎಚ್. ನಾಯಕರ ವಿಮರ್ಶಾ ನಿಲುವುಗಳನ್ನು ಅಧ್ಯಯನದ ಜೊತೆ ಜೊತೆಗೆ ಪ್ರಾತಿನಿಧಿಕವಾಗಿ ತೌಲನಿಕ ಮಾಡುವುದು.
- ಪ್ರಾತಿನಿಧಿಕವಾಗಿ ಕನ್ನಡ ವಿಮರ್ಶೆ ಪರಂಪರೆಯನ್ನು ಗಮನಿಸುತ್ತಾ ನಾಯಕರ ವಿಮರ್ಶೆ ಸ್ಥಾನವನ್ನು ಮತ್ತು ವ್ಯತ್ಯಾಸವನ್ನು ಗುರುತಿಸುವುದು.
- ಜಿ.ಎಚ್. ನಾಯಕರ ವಿಮರ್ಶೆಯನ್ನು ಮೌಲ್ಯಮಾಪನ ಮಾಡುವುದಕ್ಕಿಂತ ಹೆಚ್ಚಾಗಿ ಅದನ್ನು ವಿಶ್ಲೇಷಣೆ ಮಾಡುವುದು.
- ಜಿ.ಎಚ್. ನಾಯಕರ ವಿಮರ್ಶೆಯ ಪರಿಕಲ್ಪನೆಗಳು, ವಿಭಿನ್ನ ವಿಮರ್ಶಾ ವಿಧಾನಗಳು, ವಿಭಿನ್ನ ಸಾಹಿತ್ಯ ಪಂಥಗಳನ್ನು ಕುರಿತ ಗ್ರಹಿಕೆ ಹಾಗೂ ವಿಮರ್ಶೆಯ ವಿಶಿಷ್ಟತೆಗಳನ್ನು ಗುರುತಿಸಿ ಅಧ್ಯಯನಕ್ಕೆ ಒಳಪಡಿಸುವುದು.
- ಸಂದರ್ಭೋಚಿತವಾಗಿ ಆ ಕಾಲಘಟ್ಟದ ಇತರ ವಿಮರ್ಶಕರನ್ನು ತೆಗೆದುಕೊಂಡು ಸಾಮ್ಯ ಮತ್ತು ಭಿನ್ನತೆಗಳನ್ನು ಗುರುತಿಸುವುದು.
- ಪಾಶ್ಚಾತ್ಯ ರೂಪನಿಷ್ಠ ವಿಮರ್ಶೆ, ಅಮೇರಿಕನ್ ನವ್ಯ ವಿಮರ್ಶೆಯ ಹಾಗೂ ಜಿ.ಎಚ್. ನಾಯಕರ ಕನ್ನಡ ನವ್ಯ ವಿಮರ್ಶೆಯ ತೌಲನಿಕ ಅಭ್ಯಾಸ ಮಾಡುವ ಉದ್ದೇಶಕ್ಕೆ ಬದಲಾಗಿ ಇವೆರಡನ್ನು ಸ್ವೀಕರಿಸಿ 'ತನ್ನತನ'ದಲ್ಲಿ ಗಟ್ಟಿಯಾಗಿಸಿಕೊಂಡು ಬರೆದುದ್ದರ ಬಗ್ಗೆ ಕೃತಿಗಳ ಮೂಲಕ ಹುಡುಕುವ ಪ್ರಯತ್ನ ಮಾಡುವುದು.
- ಜಿ.ಎಚ್. ನಾಯಕರು ವಿಮರ್ಶಿಸಿದ ಕೃತಿಯನ್ನೇ ಅದೇ ಕಾಲಘಟ್ಟದ ಮತ್ತೆ ಯಾರಾದರೂ ವಿಮರ್ಶಿಸಿದ್ದರೆ, ಅಂತಹ ಲೇಖನಗಳೊಂದಿಗೆ ತೌಲನಿಕ ಅಧ್ಯಯನ ನಡೆಸುವುದು.
- ಗೋಪಾಲಕೃಷ್ಣ ಅಡಿಗ, ಬಿ. ದಾಮೋದರ ರಾವ್, ಶ್ಯಾಮಸುಂದರ ಬಿದರಕುಂದಿ, ಟಿ.ಪಿ. ಅಶೋಕ ಮುಂತಾದ ವಿಮರ್ಶಕರ ಬರಹಗಳು ನಾಯಕರ ವಿಮರ್ಶೆ ಕುರಿತು ತಾಳಿರುವ ನಿಲುವುಗಳನ್ನು ವಿಶ್ಲೇಷಿಸುವುದು.

- ಜಿ. ಎಚ್. ನಾಯಕರ ಗುರು ಪರಂಪರೆ ನವೋದಯದಿಂದ ರೂಪ ತಾಳಿದ್ದು. ಆದರೆ ನಾಯಕರ ವಿಮರ್ಶೆಯ ದೃಷ್ಟಿ 'ನವ್ಯ'ದ್ದು. ಏಕೆ ನಾಯಕರು ಈ ರೀತಿ ಭಿನ್ನರಾದರು ಎಂಬುದನ್ನು ಅಧ್ಯಯನಕ್ಕೆ ಒಳಪಡಿಸುವುದು.

## ೧.೩ ಅಧ್ಯಯನದ ವ್ಯಾಪ್ತಿ

ಜಿ.ಎಚ್. ನಾಯಕರ ವಿಮರ್ಶೆ ಸಂಕಲನಗಳಾದ 'ಸಮಕಾಲೀನ'(೧೯೭೨), 'ಅನಿವಾರ್ಯ'(೧೯೮೦), 'ನಿರಪೇಕ್ಷೆ'(೧೯೮೪), 'ನಿಜದನಿ'(೧೯೮೮), 'ಸಕಾಲಿಕ'(೧೯೯೫) ದಲ್ಲಿನ ಎರಡು ಲೇಖನಗಳಾದ "ಆಧುನಿಕ ಕನ್ನಡ ಸಾಹಿತ್ಯ ಸಂದರ್ಭ ಮತ್ತು ಮುಸ್ಲಿಂ ಸಂವೇದನೆ", "ಎಂಬತ್ತರ ದಶಕದಲ್ಲಿನ ಸಣ್ಣಕತೆ", 'ಗುಣಗೌರವ'(೨೦೦೨), 'ಹರಿಶ್ಚಂದ್ರ ಕಾವ್ಯ', 'ಓದು ವಿಮರ್ಶೆ'(೨೦೦೨) 'ಸ್ಥಿತಪ್ರಜ್ಞೆ'(೨೦೦೭), ಈ ವಿಮರ್ಶಾ ಸಂಕಲನಗಳನ್ನು ಅನುಲಕ್ಷಿಸಿ "ಜಿ.ಎಚ್. ನಾಯಕರ ವಿಮರ್ಶೆ: ತಾತ್ವಿಕ ನೆಲೆಗಳು" ಎಂಬ ಪ್ರಸ್ತುತ ಅಧ್ಯಯನದಲ್ಲಿ ತಾತ್ವಿಕ ನೆಲೆಗಳನ್ನು ಹುಡುಕುವುದು.

'ವಿನಯ ವಿಮರ್ಶೆ'(೧೯೯೧), 'ಕೃತಿಸಾಕ್ಷಿ'(೨೦೦೬), 'ಮತ್ತೆ ಮತ್ತೆ ಪಂಪ'(೨೦೦೮), 'ದಲಿತ ಹೋರಾಟ: ಗಂಭೀರ ಸವಾಲುಗಳು'(೨೦೦೪), 'ಕನ್ನಡ ಸಣ್ಣಕತೆಗಳು'(೧೯೭೮), 'ಹೊಸಗನ್ನಡ ಕವಿತೆ'(೧೯೮೫), 'ಶತಮಾನದ ಸಾಹಿತ್ಯ ಸಂಪುಟ ೧'(೨೦೦೦) ಇವೆಲ್ಲಾ ಸಂಪಾದಿತ ಕೃತಿಗಳು ಎಂಬ ಕಾರಣಕ್ಕೆ ಪ್ರಸ್ತುತ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಲ್ಲ. ಜೊತೆಗೆ 'ಸಕಾಲಿಕ'(೧೯೯೫) ಕೃತಿಯು ವೈಚಾರಿಕ ಬರಹಗಳ ಪ್ರಬಂಧವಾಗಿದೆ. ಆದ್ದರಿಂದ ಅದರಲ್ಲಿ ವಿಮರ್ಶೆಯ ನೆಲೆಗೆ ಬರಬಹುದಾದ ಎರಡು ಲೇಖನಗಳನ್ನು ಮಾತ್ರ ಅಧ್ಯಯನದ ತೆಕ್ಕೆಗೆ ತೆಗೆದುಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನವು ನಾಯಕರ ವಿಮರ್ಶೆಯ ತಾತ್ವಿಕ ನಿಲುವುಗಳಿಗೆ ಸಂಬಂಧಿಸಿದಂತೆ ಬೇರೆ ಬೇರೆ ಲೇಖಕರ ವಿಮರ್ಶಾ ವಿಧಾನಗಳೊಂದಿಗೆ ಚರ್ಚಿಸುತ್ತದೆ. ಆದರೆ ಈ ಚರ್ಚೆ ಪೂರಕವಾಗಿರುತ್ತದೆ.

## ೧.೪ ಅಧ್ಯಯನದ ವಿಧಾನ

"ಜಿ.ಎಚ್. ನಾಯಕರ ವಿಮರ್ಶೆ; ತಾತ್ವಿಕ ನೆಲೆಗಳು" ಎಂಬ ಪ್ರಸ್ತುತ ಸಂಪ್ರಬಂಧವನ್ನು ಏಳು ಅಧ್ಯಾಯಗಳಲ್ಲಿ ವಿಭಜನೆ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ.

ಅಧ್ಯಾಯ ಒಂದರಲ್ಲಿ ಪೀಠಿಕೆ, ಉದ್ದೇಶ, ವ್ಯಾಪ್ತಿ, ಅಧ್ಯಯನ ವಿಧಾನವನ್ನು ತಿಳಿಸಲಾಗಿದೆ. ಇದುವರೆಗಿನ ಅಧ್ಯಯನಗಳ ಗ್ರಹಿಕೆ ಹಾಗೂ ಅಧ್ಯಯನದ ಪರಿಕಲ್ಪನಾತ್ಮಕ ಚರ್ಚೆಯನ್ನು ಮಾಡಲಾಗಿದೆ.

ಅಧ್ಯಾಯ ಎರಡರಲ್ಲಿ 'ಜಿ.ಎಚ್. ನಾಯಕರ ವಿಮರ್ಶೆ; ಕೆಲವು ಪರಿಕಲ್ಪನೆಗಳು' ಎಂಬ ಘಟಕದಲ್ಲಿ ನಾಯಕರ ವಿಮರ್ಶೆಯಲ್ಲಿ ಬಳಕೆಯಾಗುವ ಪರಿಕಲ್ಪನೆಗಳಲ್ಲಿ ಚರ್ಚೆಯಿದೆ. ಮುಖ್ಯವಾಗಿ ಸಾಹಿತ್ಯದ ಕಲ್ಪನೆ, ಸಾಹಿತ್ಯ ವಿಮರ್ಶೆಯ ಸ್ವರೂಪ, ಸಂಸ್ಕೃತಿ, ಪರಂಪರೆ ಈ ಪರಿಕಲ್ಪನೆಗಳ ಸ್ವರೂಪವನ್ನು ಅಧ್ಯಯನದಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಜಿ.ಎಚ್. ನಾಯಕರ ವಿಮರ್ಶೆ; ವಿಭಿನ್ನ ವಿಮರ್ಶಾ ವಿಧಾನಗಳು ಎಂಬ ಮೂರನೆ ಅಧ್ಯಾಯದಲ್ಲಿ ನಾಯಕರ ವಿಮರ್ಶಾ ವಿಧಾನಗಳನ್ನು ಚರ್ಚೆಗೆ ಎತ್ತಿಕೊಳ್ಳಲಾಗಿದೆ. ಕೃತಿ ನಿಷ್ಠ ವಿಮರ್ಶೆ, ಚಾರಿತ್ರಿಕ ವಿಮರ್ಶೆ, ಸಂಸ್ಕೃತಿ ವಿಮರ್ಶೆ, ಪ್ರಾಯೋಗಿಕ ವಿಮರ್ಶೆ ಅವರ ಪ್ರಮುಖ ವಿಧಾನಗಳು. ವಿವಿಧ ಲೇಖಕರ ಸಾಹಿತ್ಯ ಕೃತಿಗಳನ್ನು ಜಿ.ಎಚ್. ನಾಯಕರು ಯಾವ ಯಾವ ವಿಮರ್ಶಾ ಮಾದರಿಯಲ್ಲಿ ಚರ್ಚಿಸುತ್ತಾರೆ. ಎಂಬ ಅಂಶಗಳೊಂದಿಗೆ ನವ್ಯದ ನಿಲುವುಗಳನ್ನು ಚರ್ಚೆಗೆ ಒಳಪಡಿಸಲಾಗುವುದು.

ಅಧ್ಯಾಯ ನಾಲ್ಕರಲ್ಲಿ ಪ್ರಾಚೀನ ಸಾಹಿತ್ಯ, ನವೋದಯ ಸಾಹಿತ್ಯ, ಪ್ರಗತಿಶೀಲ ಸಾಹಿತ್ಯ, ನವ್ಯ ಸಾಹಿತ್ಯ, ನವ್ಯೋತ್ತರ ಸಾಹಿತ್ಯಗಳ ಬಗೆಗೆ ನಾಯಕರ ಗ್ರಹಿಕೆಯನ್ನು ಹಿಡಿದಿಡುವ ಪ್ರಯತ್ನ ಮಾಡಲಾಗಿದೆ. ಈ ಸಾಹಿತ್ಯ ಪಂಥಗಳ ಬಗೆಗೆ ನಾಯಕರು ತಾಳಿರುವ ನಿಲುವುಗಳನ್ನು ಚರ್ಚಿಸಲಾಗಿದೆ.

ಜಿ.ಎಚ್. ನಾಯಕರ ವಿಮರ್ಶೆ: ವಿಶಿಷ್ಟತೆಗಳು ಎಂಬ ಐದನೆಯ ಅಧ್ಯಾಯದಲ್ಲಿ ಕೃತಿಯ ಆಯ್ಕೆ, ಭಾಷೆ ಸ್ವರೂಪ, ವಿಮರ್ಶಾ ವಿಧಾನ ಗುರುತಿಸಿಕೊಂಡು ಅವರ ವಿಶಿಷ್ಟತೆಗಳ ಬಗೆಗೆ ವಿಶ್ಲೇಷಣೆ ಮಾಡಲಾಗುವುದು.

ಅಧ್ಯಾಯ ಆರರಲ್ಲಿ ಜಿ.ಎಚ್.ನಾಯಕರ ವಿಮರ್ಶೆ; ತೌಲನಿಕ ಅಧ್ಯಯನದಲ್ಲಿ ನಾಯಕರು ಕೆಲವು ಸಾಹಿತ್ಯ ಕೃತಿಗಳ ಮೇಲೆ ಮಾಡಿರುವ ವಿಮರ್ಶಾ ಲೇಖನಗಳಿಗೂ ಮತ್ತು ಇದೇ ಕಾಲಾವಧಿಯಲ್ಲಿರುವ ಇತರ ಲೇಖಕರು ಮಾಡಿರುವ ಅದೇ ಸಾಹಿತ್ಯ ಕೃತಿಗಳ ಬಗೆಗೆ ತೌಲನಿಕ ಅಧ್ಯಯನ ಮಾಡಲಾಗುವುದು.

ಅಧ್ಯಾಯ ಏಳರಲ್ಲಿ 'ಸಮಾರೋಪ' ಅಧ್ಯಯನದಿಂದ ಕಂಡುಕೊಂಡ ಫಲಿತಗಳು ಮುಂದೆ ಅಧ್ಯಯನಕ್ಕೆ ಇರಬಹುದಾದ ಸಾಧ್ಯತೆಗಳನ್ನು ಸಹ ಗುರುತಿಸಲಾಗಿದೆ.

ಅಧ್ಯಯನದ ಕೊನೆಯಲ್ಲಿ ಅಭ್ಯಾಸ ಸೂಚಿಯನ್ನು ಕೂಡ ಕೊಡಲಾಗಿದೆ. ಇದು ಪ್ರಸ್ತುತ ಅಧ್ಯಯನದ ಒಟ್ಟು ವಿಧಾನವಾಗಿದೆ.

## ೧.೫ ಇದುವರೆಗಿನ ಅಧ್ಯಯನದ ಗ್ರಹಿಕೆ

ಈ ಸಂಪ್ರಬಂಧದ ಅಧ್ಯಯನಕ್ಕೆ ಬಳಸಿಕೊಂಡ ಜಿ.ಎಚ್.ನಾಯಕರ ವಿಮರ್ಶೆ ಕುರಿತು ಕನ್ನಡದಲ್ಲಿ ವಿಮರ್ಶೆ ರೂಪದಲ್ಲಿ ಅಧ್ಯಯನಗಳು ನಡೆದಿವೆ. ಅವುಗಳ ಸಂಕ್ಷಿಪ್ತ ಸಮೀಕ್ಷೆ ಇಲ್ಲಿದೆ.

ದಾಮೋದರ್‌ರಾವ್.ಬಿ ಅವರ 'ಆಯಾಮಗಳು'(೧೯೮೮) ಎಂಬ ಕೃತಿಯಲ್ಲಿ 'ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ವಿಮರ್ಶೆ' ಎಂಬ ಲೇಖನವಿದ್ದು ಅದರಲ್ಲಿ ಜಿ.ಎಚ್. ನಾಯಕರ ವಿಮರ್ಶೆಯ ಸ್ವರೂಪದ ಬಗ್ಗೆ ವಿವರಿಸಲಾಗಿದೆ. ಈ ಲೇಖನದಲ್ಲಿ ದಾಮೋದರ್‌ರಾವ್ ಬಿ. ಅವರು ಜಿ.ಎಚ್. ನಾಯಕರಲ್ಲಿ ಎಫ್.ಆರ್. ಲೀವೀಸ್ ರೀತಿಯ ಧೋರಣೆ, ವಿಮರ್ಶೆಯ ಹೊಣೆಗಾರಿಕೆಯ ಎಚ್ಚರ, ಪರಂಪರೆ ಮತ್ತು ಐತಿಹಾಸಿಕ ನ್ಯಾಯ, ಪುನರ್‌ಮೌಲ್ಯೀಕರಣ ಮುಂತಾದ ನೆಲೆಗಳನ್ನು ವಿಶ್ಲೇಷಿಸುತ್ತಾರೆ. ಹಾಗೆಯೇ ನಾಯಕರ ವಿಮರ್ಶೆಯಲ್ಲಿ ಎರಡು ರೀತಿಯ ಹೊಣೆಗಾರಿಕೆ ಇರುವುದನ್ನು ಅವರು ಗುರುತಿಸುತ್ತಾರೆ. ಒಂದು ಸಮಕಾಲೀನ ಸಾಹಿತ್ಯದ ದಿಕ್ಕು ದೆಸೆಯನ್ನು ನಿರ್ಣಯಿಸುವುದರಲ್ಲಿ ಪಾಲುಗೊಳ್ಳುವುದು. ಎರಡನೆಯದು ಪರಂಪರಾಗತ ಸಾಹಿತ್ಯದ ಪುನರ್‌ಮೌಲ್ಯೀಕರಣದಲ್ಲಿ ತೊಡಗುವುದು.

ಶ್ಯಾಮಸುಂದರ ಬಿದರಕುಂದಿ ಅವರ 'ಜಿ.ಎಚ್. ನಾಯಕರ ವಿಮರ್ಶೆ' (೨೦೦೫) ಲೇಖನವು, ನಾಯಕರ ಎಲ್ಲ ವಿಮರ್ಶಾ ಸಂಕಲನಗಳನ್ನು ಕುರಿತ ಒಂದು ಸಮೀಕ್ಷಾತ್ಮಕ ನೋಟವಾಗಿದೆ. ನಾಯಕರ ವಿಮರ್ಶೆಯ ಸ್ವರೂಪವನ್ನು ಎಂಟು ಭಾಗಗಳಾಗಿ ವಿಂಗಡಿಸಿಕೊಂಡು ಶ್ಯಾಮಸುಂದರ ಬಿದರಕುಂದಿಯವರು ವಿಶ್ಲೇಷಿಸುತ್ತಾರೆ. ನಾಯಕರ ವಿಮರ್ಶೆಗಳನ್ನು ಗಮನಿಸಿ ೧) ಸಮೀಕ್ಷಾತ್ಮಕ ನೋಟವಾಗಿ, ೨) ಕಾವ್ಯ ಲಕ್ಷಣ ಮೀಮಾಂಸೆಯ ನೋಟವಾಗಿ ೩) ಕೃತಿಯೊಂದರ ಪರಿಶೀಲನೆ-ಮೌಲ್ಯಮಾಪನಕ್ಕಾಗಿ ೪) ಲೇಖಕನಿಷ್ಠ ಕೃತಿ ಸಮೀಕ್ಷೆಗಾಗಿ ೫) ಇತಿಹಾಸ ಪ್ರಬಂಧವಾಗಿ ೬) ಪ್ರಕಾರ ಸ್ವರೂಪದ ವಿಶ್ಲೇಷಣೆ-ಅನ್ವಯಕ್ಕಾಗಿ ೭) ಕೃತಿನಿಷ್ಠ ವಿಮರ್ಶೆಗಾಗಿ ೮)ತಮ್ಮ ಫ್ಯಾಕಲ್ಟಿಯಾದ 'ವಿಮರ್ಶೆ'ಯ ನೆಲೆ-ನಿಲುವಿನ ಸ್ಪಷ್ಟೀಕರಣಕ್ಕಾಗಿ ಎಂಬ ನೆಲೆಗಳಲ್ಲಿ ವಿಂಗಡಿಸುತ್ತಾರೆ. ಜೊತೆಗೆ 'ಗುಣಗೌರವ' ಕೃತಿಯ ಬಗ್ಗೆಯು ಮಾತಾಡುತ್ತಾ ನಾಯಕರು 'ಗುಣ ಪಕ್ಷಪಾತಿ ವಿಮರ್ಶಕ' ಎಂದು ಶ್ಲಾಘಿಸುತ್ತಾರೆ ಒಟ್ಟಾರೆಯಾಗಿ ಇಲ್ಲಿ ನಾಯಕರ ಎಲ್ಲ ವಿಮರ್ಶಾ ಸಂಕಲನಗಳ ಸಮೀಕ್ಷೆ ಈ ಲೇಖನದಲ್ಲಿದೆ.

ಕೇಶವಶರ್ಮ ಕೆ. ಅವರ 'ಮಾರ್ಕ್ಸ್‌ವಾದಿ ಸಾಹಿತ್ಯ ವಿಮರ್ಶೆ' (೨೦೦೮) ಎಂಬ ಕೃತಿಯಲ್ಲಿ 'ವ್ಯಕ್ತಿ ವಿಶಿಷ್ಟತೆಯ ಪರಿಕಲ್ಪನೆ ಮತ್ತು ಸಾಹಿತ್ಯ ವಿಮರ್ಶೆ' ಎಂಬ ಲೇಖನವಿದ್ದು ಅದರಲ್ಲಿ ಶರ್ಮರು ಜಿ.ಎಚ್. ನಾಯಕರ ವಿಮರ್ಶೆಯ ಬಗ್ಗೆ ವಿಮರ್ಶಿಸುತ್ತಾರೆ. ನಾಯಕರು ಸಾಮಾಜಿಕ ತಲ್ಲಣ ಮತ್ತು ಚರಿತ್ರೆ ಬಗ್ಗೆ ಗಮನಾರ್ಹವಾಗಿ ಚಿತ್ರಿಸಿಲ್ಲ. ಅವರು ಸಾಹಿತ್ಯ ಕೃತಿಯೊಂದು ಕಟ್ಟಿಕೊಳ್ಳುವ ವಸ್ತುಗಳಿಗೆ ನಿಷ್ಠರಾಗಿದ್ದಾರೆ ಹೊರತು, ಚಾರಿತ್ರಿಕ ವಿವರಗಳಿಗೆ ಹೆಚ್ಚು ನಿಷ್ಠರಾಗಿಲ್ಲ ಎಂಬ ಕಾಮೆಂಟ್‌ನ್ನು ಕೇಶವಶರ್ಮ ಅವರು ನೀಡುತ್ತಾರೆ. ನಾಯಕರ ಚರಿತ್ರೆಯ ಗ್ರಹಿಕೆ 'ಕ್ರಿಕೆಟ್ ಕಾಮೆಂಟರಿ' ತರಹದ್ದು ಎಂದು ನಾಯಕರ 'ತುಘಲಕ್ ವಸ್ತು ವಿಶ್ಲೇಷಣೆ' ಕುರಿತ ಲೇಖನಕ್ಕೆ ಅವರು ಪ್ರತಿಕ್ರಿಯಿಸುತ್ತಾರೆ. ಶರ್ಮರ ಈ ಲೇಖನದಲ್ಲಿ ನವ್ಯ ವಿಮರ್ಶಕರಿಗೆ 'ಸಾಮಾಜಿಕ ಅಭಿರುಚಿ'ಗಿಂತ 'ವೈಯಕ್ತಿಕ ಅಭಿರುಚಿ' ಮುಖ್ಯವಾಯಿತೆನ್ನುವ ನಿಲುವು ವ್ಯಕ್ತವಾಗುತ್ತದೆ.

ಶ್ರೀಮತಿ ಎಚ್.ಎಸ್. ಅವರು 'ಹಳಗನ್ನಡ ಸಾಹಿತ್ಯಾಧ್ಯಯನ ಸಮೀಕ್ಷೆ' (೧೯೯೩) ಎಂಬ ಕೃತಿಯಲ್ಲಿ 'ಪುನರ್‌ಮೌಲ್ಯಮಾಪನ' ಎಂಬ ಭಾಗದಲ್ಲಿ ಜಿ.ಎಚ್. ನಾಯಕರ ಹಳಗನ್ನಡ ಸಾಹಿತ್ಯ ಕೃತಿಗಳ ಪುನರ್‌ಮೌಲ್ಯಮಾಪನಕ್ಕೆಂದು ಎರಡು ಮಾನದಂಡಗಳನ್ನು ಗುರುತಿಸುತ್ತಾರೆ. ಅವೆಂದರೆ ೧) ಅನುಭವದ ಅಧಿಕೃತತೆ; ೨) ಅನುಭವ ಮತ್ತು ಅಭಿವ್ಯಕ್ತಿಗಳ ಸಾವಯವತೆ. ಶ್ರೀಮತಿ ಅವರ ಪ್ರಕಾರ ಈ ಎರಡನೆಯ ಮಾನದಂಡವನ್ನು ಜಿ.ಎಚ್. ನಾಯಕರು ಬೆಳೆಸಿದರು. ಪಂಪ ಮತ್ತು ರನ್ನ ಇವರಿಬ್ಬರ ಬಗೆಗೆ ಬರೆದ ಲೇಖನಗಳಲ್ಲಿ ಇದಕ್ಕೆ ನಿದರ್ಶನಗಳು ದೊರಕುತ್ತವೆಂದು ಶ್ರೀಮತಿಯವರು ವಿವರಿಸುತ್ತಾರೆ.

ಟಿ.ಪಿ.ಅಶೋಕ ಅವರು ತಮ್ಮ 'ಪುಸ್ತಕ ಪ್ರೀತಿ' (೧೯೯೩) ಕೃತಿಯಲ್ಲಿ ಜಿ.ಎಚ್. ನಾಯಕರ 'ನಿಜದನಿ' ಕೃತಿಯನ್ನು ಕುರಿತು ವಿಮರ್ಶಿಸುತ್ತಾರೆ. ಇದರಲ್ಲಿ ಜಿ.ಎಚ್. ನಾಯಕರಿಗೆ ವಿಮರ್ಶೆ ಒಂದು ತಪಸ್ಸು ಎಂದು ಅವರು ಚಿತ್ರಿಸುತ್ತಾರೆ. ಅಶೋಕ ಅವರು ನಾಯಕರ ಈ ಕೃತಿಯಲ್ಲಿ 'ಕೃತಿನಿಷ್ಠ' ಮತ್ತು 'ಸಂಸ್ಕೃತಿನಿಷ್ಠ' ಎರಡೂ ಬಗೆಯ ವಿಧಾನಗಳನ್ನು ಗುರುತಿಸುತ್ತಾರೆ. ಅಶೋಕ ಅವರು ನಾಯಕರ ವಿಮರ್ಶೆಯಲ್ಲಿ ಕೃತಿಯ ಸೂಕ್ಷ್ಮತೆ, ವಿಮರ್ಶಿಸುವ ಶೈಲಿ, ಶಬ್ದ ವಿನ್ಯಾಸದ ವಿಶ್ಲೇಷಣೆ, ಕೃತಿಯೊಂದರ ಅನುಭವಗಳನ್ನು ಗ್ರಹಿಸುವ ವಿವರವಿದೆ.

ಎಸ್.ಆರ್.ವಿಜಯ್‌ಶಂಕರ್ ಅವರು ತಮ್ಮ 'ಒಳದನಿ' (೨೦೦೪) ಎಂಬ ಕೃತಿಯಲ್ಲಿ 'ಜಿ.ಎಚ್. ನಾಯಕರ ಎರಡು ವಿಮರ್ಶಾ ಕೃತಿಗಳು; 'ಹರಿಶ್ಚಂದ್ರ ಕಾವ್ಯ; ಓದು ವಿಮರ್ಶೆ' ಮತ್ತು 'ಗುಣಗೌರವ' ಎಂಬ ಲೇಖನದಲ್ಲಿ ನಾಯಕರ ವಿಮರ್ಶೆಯ ಕೆಲವು ಮಿತಿಗಳನ್ನು ಗುರುತಿಸುತ್ತಾರೆ.

ನಾಯಕರು ಹಳಗನ್ನಡ ಸಾಹಿತ್ಯವನ್ನು ಪುನರ್‌ಪರಿಶೀಲಿಸುವಾಗ ನವ್ಯ ವಿಮರ್ಶೆ ಸಂವೇದನೆಯಿಂದ ವಿಮರ್ಶಿಸುತ್ತಾರೆ ಎಂಬುದನ್ನು ವಿಜಯ್‌ಶಂಕರ್ ಗ್ರಹಿಸುತ್ತಾರೆ.

ಜಿ.ಎಂ.ಹೆಗಡೆ ಅವರು ತಮ್ಮ 'ಗ್ರಂಥಸಂಗಾತಿ' ಎಂಬ ಕೃತಿಯಲ್ಲಿ ಇವರು "ಸಂಸ್ಕೃತಿ ಕೇಂದ್ರಿತ ವಿಮರ್ಶೆ ಮಾರ್ಗದ ಅಗ್ರಗಣ್ಯ ವಿಮರ್ಶಕರಲ್ಲೊಬ್ಬರು ಜಿ.ಎಚ್. ನಾಯಕರು" ಎಂದು ಗುರುತಿಸುತ್ತಾರೆ. ಈ ರೀತಿಯ ದೃಷ್ಟಿಕೋನವು ನಾಯಕರ ಬಗೆಗೆ ಮತ್ತೊಂದು ರೀತಿ ಚಿಂತನೆ ಮಾಡುತ್ತದೆ.

ಈ ಕೆಲವು ಅಧ್ಯಯನಗಳು ಜಿ.ಹೆಚ್. ನಾಯಕರ ವಿಮರ್ಶೆಯ ಬಗೆಗೆ ತಾಳಿರುವ ನಿಲುವುಗಳನ್ನು ಬಳಸಿಕೊಳ್ಳುತ್ತಾ ಅಧ್ಯಯನ ಕೈಗೊಳ್ಳಲು ಇಲ್ಲಿ ಪ್ರಯತ್ನಿಸಲಾಗಿದೆ. ಈ ಲೇಖನಗಳ ವಿಸ್ತೃತ ಚರ್ಚೆಯನ್ನು ಅಧ್ಯಯನ ಸಂದರ್ಭದಲ್ಲಿ ಮಾಡಲಾಗಿದೆ. ಜಿ.ಎಚ್. ನಾಯಕರ ವಿಮರ್ಶೆಯ ಬಗೆಗೆ ನೀಡಿರುವ ತೀರ್ಮಾನಗಳು ಮೌಲ್ಯಮಾಪನ ಕ್ರಮದ ಸುಳಿವುಗಳನ್ನು ಅನುಲಕ್ಷಿಸಿ ಅಧ್ಯಯನ ನಡೆಸಲಾಗಿದೆ.

## ೧.೬ ಅಧ್ಯಯನದ ಪರಿಕಲ್ಪನಾತ್ಮಕ ಚರ್ಚೆ

'ಜಿ.ಎಚ್. ನಾಯಕರ ವಿಮರ್ಶೆ: ತಾತ್ವಿಕ ನೆಲೆಗಳು' ಎಂಬ ಶೀರ್ಷಿಕೆಯಲ್ಲಿ 'ವಿಮರ್ಶೆ' ಮತ್ತು 'ತಾತ್ವಿಕತೆ' ಎಂಬ ಎರಡು ಪರಿಕಲ್ಪನೆಗಳಿವೆ. ವಿಮರ್ಶೆಯಲ್ಲಿ 'ತಾತ್ವಿಕ'ಅಂಶಗಳು ಕಾವ್ಯದ ತಾತ್ವಿಕಾಂಶಗಳಿಗಿಂತ ಭಿನ್ನವಾಗಿರುತ್ತವೆ. "ಸಾಹಿತ್ಯ ಮತ್ತು ತಾತ್ವಿಕತೆಯ ಸಂಬಂಧದ ಪ್ರಶ್ನೆ ಈ ಯುಗದ ಸಾಹಿತ್ಯ ಮೀಮಾಂಸೆಯ ಮುಖ್ಯ ಪ್ರಶ್ನೆಯಾಗಿದೆ.[೧]" ಎಂಬ ಡಿ.ಆರ್.ನಾಗರಾಜ ಅವರ ಮಾತು ಇಲ್ಲಿ ಗಮನಾರ್ಹ. ಆದರೆ ಈ ಪ್ರಶ್ನೆಯನ್ನು ಬಿಡಿಸುವುದು ಕಷ್ಟ.

ಕಾವ್ಯದಲ್ಲಿ ತಾತ್ವಿಕತೆಯ ಪಾತ್ರ ಸಂಕೀರ್ಣ ಸ್ವರೂಪದ್ದು. ಆದರೆ ವಿಮರ್ಶೆಯಲ್ಲಿ ತಾತ್ವಿಕತೆ ಅನ್ವೇಷನಾತ್ಮಕವಾದದ್ದು ಮತ್ತು ಮೂರ್ತ ಸ್ವರೂಪದ್ದು. ಕಾರಣ ಸೃಜನಶೀಲ ಸಾಹಿತ್ಯದಲ್ಲಿ ಅಮೂರ್ತವಾಗಿ ಬೇರೂರಿದ್ದ ತಾತ್ವಿಕತೆಯ ಅಂಶವನ್ನು ವಿಮರ್ಶೆಯು ಚಿಗುರಿಸಬಲ್ಲದು. ಒಂದು ವಸ್ತುವನ್ನು, ಸಂಗತಿಯನ್ನು, ಸನ್ನಿವೇಶವನ್ನು ಹೇಗೆ ನೋಡಬೇಕು ಎಂಬುದನ್ನು ನಿರ್ಣಯಿಸುವುದು ಸೃಜನಶೀಲ ಕವಿಯ ಗ್ರಹಿಕೆಯ ವಿಧಾನ. ಈ ಸೃಜನಶೀಲ ಕವಿಯ ಅನುಭವವನ್ನು ತೂಗಿ ಬೆಲೆಗಟ್ಟುವ ವಿಧಾನವೊಂದು ವಿಮರ್ಶೆಯ ಮಾನದಂಡಗಳಲ್ಲಿರುತ್ತದೆ. ಇದನ್ನೆ ತಾತ್ವಿಕತೆ ಎಂದು ವರ್ಣಿಸಬಹುದು. ಇಂತಹ ವಿಮರ್ಶಾವಿಧಾನದ ಸಂಸ್ಕರಣ, ಶೋಧನೆ, ಹೊಸ ವಿಧಾನಗಳ ಸೃಷ್ಟಿಗೆ ಕಾರಣ ತಾತ್ವಿಕತೆ.

ಕಾವ್ಯ, ಸಣ್ಣಕತೆ, ಕಾದಂಬರಿ, ನಾಟಕ ಮುಂತಾದ ಸೃಜನಶೀಲ ಸಾಹಿತ್ಯ ಪ್ರಕಾರಗಳು ಜೀವನಾನುಭವಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಅದಕ್ಕೆ ತಾತ್ವಿಕತೆಯನ್ನು ಲೇಪವಾಗಿ ಮಾಡಿಕೊಂಡು ಬಿಡುತ್ತವೆ. ಆದರೆ ಈ ಲೇಪ ಸಾಹಿತ್ಯಕೃತಿಯೊಳಗೆ ಅಮೂರ್ತಸ್ವರೂಪದಲ್ಲಿ ಅಡಗಿರುತ್ತದೆ. ಹೀಗೆ ಒಂದು ಸಾಹಿತ್ಯ ಕೃತಿಯ ಗ್ರಹಿಕೆಯನ್ನು ಅದರ ರಸಾನುಭೂತಿ, ಸೌಂದರ್ಯನುಭವದಿಂದ ನಿರ್ಧರಿಸುತ್ತ ಹೋಗಬೇಕಾಗುತ್ತದೆ. ಅದರ ಜೊತೆಗೆ ಆ ಕೃತಿಯೊಳಗಿನ 'ಧೋರಣೆ', 'ಒಲವು', 'ನಿಲವು'ಗಳು ಬಗ್ಗೆಯೂ ಮಹತ್ವ ವಹಿಸಿದಾಗ ತಾತ್ವಿಕ ಚಿಂತನೆಯು ವಿಮರ್ಶೆಯಲ್ಲಿ ನಡೆಯುತ್ತದೆ. ತಾತ್ವಿಕತೆ ಎಂಬುದು ತತ್ವಜ್ಞಾನವಲ್ಲ, ವೈಚಾರಿಕತೆಯಲ್ಲ ಎಂಬುದಾಗಿ ಗುರುತಿಸಿಕೊಳ್ಳಬೇಕಾಗುತ್ತದೆ. ಈ ತಾತ್ವಿಕ ಪದ ವಿಶಿಷ್ಟ ಅರ್ಥದಲ್ಲಿ ಬಳಕೆಗೆ ಬಂದುದು ನವ್ಯ ಸಾಹಿತ್ಯದ ಸಂದರ್ಭದಲ್ಲಿ ಎಂಬುದನ್ನು ಗಮನಿಸಬೇಕು.

ಕನ್ನಡ ಸಾಹಿತ್ಯ ಸಂದರ್ಭದಲ್ಲಿ 'ತಾತ್ವಿಕತೆ' ಎಂಬುದು ಭಿನ್ನ ಭಿನ್ನವಾದ ಸ್ವರೂಪ ತಾಳಿದೆ. ತಾತ್ವಿಕ ನೆಲೆಗಳು ಪ್ರಾಚೀನ ಸಾಹಿತ್ಯ, ನವೋದಯ ಸಾಹಿತ್ಯ, ಪ್ರಗತಿಶೀಲ ಸಾಹಿತ್ಯ, ನವ್ಯಸಾಹಿತ್ಯ, ನವ್ಯೋತ್ತರ ಸಾಹಿತ್ಯದಲ್ಲಿ ವಿಭಿನ್ನ ದೃಷ್ಟಿಕೋನಗಳಿಂದ ಮೂಡಿಬಂದಿವೆ. ಈ ಎಲ್ಲ ಸಾಹಿತ್ಯ ಪಂಥಗಳ ತಾತ್ವಿಕತೆ ಒಂದೇ ರೀತಿಯಾಗಿರುವುದಿಲ್ಲ. 'ತತ್ತ್ವ' ಎಂಬುದಕ್ಕೆ 'ಏನಿರುವುದೋ ಅದು', ಸ್ವರೂಪ, ಸಾರ, ಸತ್ಯ, ಸಿದ್ಧಾಂತ ಎಂಬ ಅರ್ಥಗಳಿವೆ. ಆದ್ದರಿಂದ ಪ್ರತಿಯೊಂದು ಸಾಹಿತ್ಯ ಪಂಥಕ್ಕೂ ಸಾಹಿತ್ಯ ಪ್ರಕಾರಕ್ಕೂ ತನ್ನದೇ ಆದ ತಾತ್ವಿಕತೆಗಳಿರುವುದು ಸತ್ಯ.

ಈ ಪ್ರಬಂಧದಲ್ಲಿ ಬಳಸಿದ ಅರ್ಥದಲ್ಲಿ 'ತಾತ್ವಿಕತೆ' ಎಂಬ ಪದಪ್ರಯೋಗ ಕಾಣಿಸುವುದು ನವ್ಯ ಸಂದರ್ಭದಲ್ಲಿ. ಕಾರಣ ವಿಮರ್ಶೆಯಲ್ಲಿ ಹೊಸ ಪರಿಕಲ್ಪನೆ, ಪರಿಭಾಷೆ, ವಿಧಾನಗಳು ರೂಪಗೊಂಡ ಕಾಲವದು. ಆದ್ದರಿಂದ ಪ್ರಾಚೀನ ಕಾವ್ಯಗಳಿಗೆ ಹೊಸ ಧಾರ್ಮಿಕ ಪರಿಪ್ರೇಕ್ಷ್ಯಗಳೊಂದಿಗೆ ಅವುಗಳ ತಾತ್ವಿಕತೆಯನ್ನು ಶೋಧಿಸುವ ಕಾರ್ಯನಡೆಯಿತು. ಕಾವ್ಯ, ಸಣ್ಣಕತೆ, ಕಾದಂಬರಿ, ನಾಟಕಗಳಲ್ಲಿ ಹೊಸ ಧೋರಣೆ ಹಾಗೂ ನಿಲುವುಗಳು ಹುಟ್ಟಿಕೊಂಡವು. ಆಗ ವಿಮರ್ಶೆಯಲ್ಲೂ ತನ್ನ ತಾನೇ ಹೊಸ ದೃಷ್ಟಿಕೋನಗಳಿಂದ ಸಾಹಿತ್ಯವನ್ನು ನೋಡುವಂತಾಯಿತು. ಆ ಫಲವೇ ವಿಮರ್ಶೆಯಲ್ಲೂ ತಾತ್ವಿಕ ಚಿಂತನೆಗಳು ಶುರುವಾಗಲು ಕಾರಣವಾಯಿತು. ಇದನ್ನು ಕುರಿತು ಡಿ.ಆರ್.ನಾಗರಾಜ ಅವರು "ಆಕೃತಿ, ವಸ್ತು, ತಾತ್ವಿಕ ನಿಲುವು-ಅಂತಿಮವಾಗಿ ಸಾಹಿತ್ಯ ವಿಮರ್ಶೆಯ ಮೂಲಭೂತ ಸಾಮಗ್ರಿ ಇವೇ, ಇಲ್ಲಿ ವಸ್ತು ಮತ್ತು ತಾತ್ವಿಕ ನಿಲುವುಗಳ ಸಂಬಂಧ ಮಾತ್ರ ತೀರಾ ಸೂಕ್ಷ್ಮವಾದದ್ದು. ವಸ್ತುವಿಗೆ ತನ್ನದೇ ಆದ ಸ್ವಂತ ಅಸ್ತಿತ್ವವೊಂದು ಇದೆಯಾದರೂ, ಅದು ನಿರ್ದಿಷ್ಟ ಕೃತಿಯೊಂದರಲ್ಲಿ ರೂಪು ತಳೆಯುವುದು ತಾತ್ವಿಕ ನಿಲುವಿನ ಜೊತೆಗೆ ಉಂಟಾಗುವ ಅಂತರ್ ಪ್ರಕ್ರಿಯೆಗಳಿಂದ.[೨]" ಎಂದು ವಿವೇಚಿಸುತ್ತಾರೆ.

"ಸಾಹಿತ್ಯ ಬಂಧದಲ್ಲಿ ತತ್ತ್ವವು ಮೂಡುವುದು, ಸಾಹಿತ್ಯದ ವಸ್ತುವಿನ ವಿವರಗಳನ್ನು ಕಟ್ಟುವ ಕ್ರಮದಲ್ಲಿಯೇ[೩]" ಎನ್ನುವ ಹಾಗೆಯೇ ಈ ಅಧ್ಯಯನದಲ್ಲೂ ವಿಮರ್ಶೆಯ ಬಂಧದಲ್ಲಿಯೇ ಸಾಹಿತ್ಯ ವಿವರಗಳನ್ನು ವಿಶ್ಲೇಷಿಸುವಾಗ ತಾತ್ವಿಕ ನೆಲೆಗಳು ಮೂಡಿ ಬರುತ್ತವೆ ಎಂದು ನಂಬಲಾಗಿದೆ. ಅವು ವಿಮರ್ಶೆಯ ವಿಧಾನಗಳಾಗಿರಬಹುದು, ಪರಿಕಲ್ಪನೆಗಳಾಗಿರಬಹುದು, ನವ್ಯ ವಿಮರ್ಶೆಯ ಪರಿಭಾಷೆಗಳಾಗಿರಬಹುದು ಇವುಗಳನ್ನೆಲ್ಲ ಸಾಹಿತ್ಯ ವಿಮರ್ಶೆಯ ತಾತ್ವಿಕ ನೆಲೆಗಳೆಂದು ಗ್ರಹಿಸಿ ಅಧ್ಯಯನ ಮಾಡಲಾಗಿದೆ. ಯಾಕೆಂದರೆ ನಾಯಕರಲ್ಲೂ ಇಂತಹ ತಾತ್ವಿಕ ನೆಲೆಗಳು ಅವರ ವಿಮರ್ಶಾ ಕೃತಿಗಳಲ್ಲಿ ಕಾಣಬರುತ್ತವೆ.

'ಮೇಜರ್' ಮತ್ತು 'ಮೈನರ್' ಕವಿಗಳಿಗೆ ತತ್ತ್ವಗಳಲ್ಲಿ ಜಿಜ್ಞಾಸೆ ಇರುತ್ತದೆ ಎಂದು ಹೇಳುವ ಯು.ಆರ್.ಅನಂತಮೂರ್ತಿಯವರು "ತನ್ನ ಅನುಭವದ ಮೇಲೆ ಹತೋಟಿಯುಳ್ಳ ಲೇಖಕ ತತ್ತ್ವಗಳಿಗೆ ಹೀಗೆ ಹೆದರಬೇಕಾದ್ದಿಲ್ಲ, ಎಲ್ಲಾ ತತ್ತ್ವಗಳನ್ನು ಉಪಕರಣಗಳಾಗಿ ಉಪಯೋಗಿಸಿಕೊಳ್ಳಬಲ್ಲ ಧೈರ್ಯ ಅವನಿಗಿರುತ್ತದೆ. ತತ್ವಗಳನ್ನು ಪ್ರೇಮದಷ್ಟು ತೀವ್ರವಾಗಿ ಭಾವಿಸಬಲ್ಲ ಭಾರತೀಯ ಲೇಖಕನಿಗೆ ಈಗ ಮಾರ್ಕ್ಸ್‌ವಾದ, ಲೋಹಿಯಾ, ಗಾಂಧಿ, ಉಪನಿಷತ್ತು, ಲೋಕಾಯತ ಎಲ್ಲವೂ ಪ್ರಪಂಚವನ್ನು ಅರಿಯುವ ಅತ್ಯಂತ ಅವಶ್ಯವಾದ ಸಾಧನಗಳಾಗಬಹುದು[೪]" ಎಂದು ಅಭಿಪ್ರಾಯ ಪಡುತ್ತಾರೆ. ನವ್ಯ ವಿಮರ್ಶೆಯಲ್ಲಿ ತತ್ತ್ವಗಳು ಉಪಕರಣಗಳೇ ಹೊರತು ಅಂತಿಮ ನಿಲುವುಗಳಲ್ಲ. ನವ್ಯ ವಿಮರ್ಶೆಯು ನವೋದಯದ ಭಾವಮಯತೆ ಮತ್ತು ರಸಪರವಾದ ಉತ್ಪ್ರೇಕ್ಷಿತ ತಾತ್ವಿಕತೆಯನ್ನು ವಿರೋಧಿಸಿತು. ಕೃತಿಯನ್ನು ಶೋಧನಾತ್ಮಕ ನೆಲೆಯಿಂದ ವಿಮರ್ಶಿಸುವ ನಿಲುವನ್ನು ನವ್ಯ ವಿಮರ್ಶೆಯು ಬಹುಗಟ್ಟಿಯಾಗಿ ಅಪ್ಪಿಕೊಂಡಿದೆ. ಸೃಜನಶೀಲ ಸಾಹಿತ್ಯ ಕೃತಿಗಳ ಬಗೆಗೆ ನವ್ಯದ ಗ್ರಹಿಕೆಯೇ ಬೇರೆಯಾಗಿದೆ. ಅದು ಅಸ್ತಿತ್ವವಾದಿ ಧೋರಣೆಯನ್ನು ಹುಡುಕುತ್ತದೆ.

ಜಿ.ಎಚ್. ನಾಯಕರ ವಿಮರ್ಶೆಯಲ್ಲಿ ಅನಂತಮೂರ್ತಿಯವರು ಗುರುತಿಸುವ, ಮಾರ್ಕ್ಸ್, ಲೋಹಿಯಾ, ಗಾಂಧಿ ಮೊದಲಾದ ಯಾವುದೇ ವಾದಗಳ ತಾತ್ವಿಕ ನೆಲೆಗಳು ಇಲ್ಲ. ನಾಯಕರಲ್ಲಿ ಸಾಹಿತ್ಯಿಕ ಅಂಶಗಳನ್ನು ಕುರಿತ ತಾತ್ವಿಕ ನೆಲೆಗಳಿವೆ. ನಾಯಕರು ಯಾವುದೇ 'ಸಿದ್ಧಾಂತ'ವನ್ನು ಹಿಡಿದುಕೊಂಡು ಕೃತಿಯನ್ನು ಭೇದಿಸುವುದಿಲ್ಲ. ಆದರೂ ನವ್ಯ ವಿಮರ್ಶೆಯ ತಾತ್ವಿಕ ನಿಲುವುಗಳನ್ನು ಇವರ ವಿಮರ್ಶೆಯಲ್ಲಿ ಕಾಣಬಹುದು. ನಾಯಕರು ಕೃತಿಯೊಳಗೆ ವಸ್ತು, ಅನುಭವ, ಅಭಿವ್ಯಕ್ತಿ, ಸೃಜನಶೀಲತೆಯನ್ನು ಗಮನಿಸುತ್ತಾರೆ. ಆಗ ಸ್ವೋಪಜ್ಞ ಸಾಹಿತಿ ಮತ್ತು ಬರಹ ಯಾವುದೆಂದು ಶೋಧಿಸುತ್ತಾರೆ. ಕೃತಿಯ ಮೌಲ್ಯಮಾಪನ, ಪುನರ್‌ಮೌಲ್ಯಮಾಪನ ಮೊದಲಾದ ಮಾನದಂಡಗಳಿಂದ ಕೃತಿಯ ಬಗ್ಗೆ ಮೌಲ್ಯ ನಿರ್ಣಯ ಮಾಡುತ್ತಾರೆ. ನವ್ಯ ವಿಮರ್ಶೆಯ ಸಂಕೇತ, ಪ್ರತಿಮೆ, ತಂತ್ರ, ಶೈಲಿ, ವಸ್ತು, ಅನುಭವ, ಶಿಲ್ಪ ಮತ್ತು ಬಂಧ, ಕರ್ಷಣ ಮೊದಲಾದ

ಪರಿಭಾಷೆಗಳನ್ನು ಬಳಸಿ ಕೃತಿಯನ್ನು ಪ್ರಾಯೋಗಿಕ ವಿಮರ್ಶೆಗೆ ಒಳಪಡಿಸುತ್ತಾರೆ. ಸಾಹಿತ್ಯ, ಸಾಹಿತ್ಯ ವಿಮರ್ಶೆ, ಸಂಸ್ಕೃತಿ, ಪರಂಪರೆ ಮೊದಲಾದ ಪರಿಕಲ್ಪನೆಗಳ ಮೂಲಕ ಕನ್ನಡ ಸಾಹಿತ್ಯವನ್ನು ಅವಲೋಕನ ಮಾಡುತ್ತಾರೆ. ಕೃತಿನಿಷ್ಠ ವಿಮರ್ಶೆ, ಚಾರಿತ್ರಿಕ ವಿಮರ್ಶೆ, ಸಂಸ್ಕೃತಿನಿಷ್ಠ ವಿಮರ್ಶೆ, ಪ್ರಾಯೋಗಿಕ ವಿಮರ್ಶೆ ಎಂಬ ಮಾನದಂಡಗಳೊಂದಿಗೆ ಕೃತಿಯ ಒಳವಿವರಗಳನ್ನು ಪರಿಶೀಲಿಸುತ್ತಾರೆ. ಅಷ್ಟೆ ಅಲ್ಲ 'ಸಾಹಿತ್ಯ ವಿನಯ' ಇವರ ಪ್ರಮುಖ ತಾತ್ವಿಕ ಪರಿಕಲ್ಪನೆಯಾಗಿದೆ. ಇವೆಲ್ಲವನ್ನು ಪ್ರಸ್ತುತ ಅಧ್ಯಯನ ಸಂದರ್ಭದಲ್ಲಿ ತಾತ್ವಿಕ ನೆಲೆಗಳು ಎಂದೇ ಸ್ಥೂಲವಾಗಿ ಗ್ರಹಿಸಿ ಅಧ್ಯಯನಕ್ಕೆ ತೊಡಗಿಕೊಳ್ಳಲಾಗಿದೆ.

**ಟಿಪ್ಪಣಿಗಳು:**

೧. ನಾಗರಾಜ. ಡಿ.ಆರ್, 'ಅಮೃತ ಮತ್ತು ಗರುಡ', ಪುಟ-೫
೨. ಅದೇ, ಪುಟ-೬
೩. ಬಸವರಾಜ ಕಲ್ಗುಡಿ, 'ನಕ್ಷೆ-ನಕ್ಷತ್ರ', ಪುಟ-೧
೪. ಅನಂತಮೂರ್ತಿ.ಯು.ಆರ್, 'ಸನ್ನಿವೇಶ', ಪುಟ-೪೭

ಅಧ್ಯಾಯ: ೨.

# ಜಿ.ಎಚ್. ನಾಯಕರ ವಿಮರ್ಶೆ: ಕೆಲವು ಪರಿಕಲ್ಪನೆಗಳು

೨.೧. ಸಾಹಿತ್ಯದ ಪರಿಕಲ್ಪನೆ
೨.೨. ಸಾಹಿತ್ಯ ವಿಮರ್ಶೆಯ ಪರಿಕಲ್ಪನೆ
೨.೩. ಪರಂಪರೆಯ ಪರಿಕಲ್ಪನೆ

ಕನ್ನಡ ಸಾಹಿತ್ಯ ವಿಮರ್ಶೆ ಹಲವಾರು ಬಿಕ್ಕಟ್ಟುಗಳನ್ನು ಎದುರಿಸುತ್ತ ಬಂದಿದೆ. ಕಾಲಕಾಲಕ್ಕೆ ಭಿನ್ನ ಸಾಂಸ್ಕೃತಿಕ ಚಿಂತನೆಗಳು ಮುಖಾಮುಖಿಯಾದಾಗ ವಿಮರ್ಶೆಯ ತಾತ್ವಿಕ ಸ್ವರೂಪ ಬದಲಾಗಿದೆ. ಒಂದು ನೂರು ವರ್ಷಗಳ ವಿಮರ್ಶೆಯನ್ನು ಗಮನಿಸಿದಾಗ ವಿಮರ್ಶೆಯ ಪರಿಭಾಷೆ, ಪರಿಕಲ್ಪನೆ, ವಿಮರ್ಶಾ ಪ್ರಸ್ಥಾನ ಹಾಗೂ ದೃಷ್ಟಿಕೋನಗಳಲ್ಲಿ ಅದು ಸಂರಚಿಸಲ್ಪಟ್ಟಿರುವುದು ತಿಳಿಯುತ್ತದೆ. ಹೀಗೆ ಚಾರಿತ್ರಿಕವಾಗಿ ಬಹುತೇಕ ವಿಮರ್ಶೆಯ ಪರಿಕಲ್ಪನೆಗಳು ಉಗಮಗೊಂಡಿವೆ. ಹಾಗೆಯೇ ಒಂದು ಪರಿಕಲ್ಪನೆ ನಂತರದಲ್ಲಿ ಬದಲಾವಣೆಗೊಂಡು ಹೊಸ ಮತ್ತೊಂದು ಪರಿಕಲ್ಪನೆಯ ಹುಟ್ಟಿಗೆ ಕಾರಣವೂ ಆಗಿದೆ. ಸಾಹಿತ್ಯ ಕೃತಿಯೊಂದನ್ನು ವಿಮರ್ಶಕರು ಅವಲೋಕನ ಮಾಡುವಾಗ ಹೊಸದೊಂದು ಪರಿಕಲ್ಪನೆಯನ್ನು ಸಾಹಿತ್ಯ ವಿಮರ್ಶೆಗೆ ಕೊಡುಗೆಯಾಗಿ ಕೊಡಬಹುದು. ಅಥವಾ ಈಗಾಗಲೇ ಇರುವ ಪರಿಕಲ್ಪನೆಯನ್ನು ಅವರು ಪುನಃ ಬಳಕೆಗೆ ಸ್ವೀಕರಿಸಿಕೊಳ್ಳಬಹುದು. ಇಂತಹ ಸ್ವೀಕರಣ ಮನೋಧೋರಣೆ ಕನ್ನಡ ವಿಮರ್ಶಕರಿಗೂ ಇದೆ.

ಸ್ವಾತಂತ್ರ್ಯ ಪೂರ್ವ ವಿಮರ್ಶೆಗೂ, ಸ್ವಾತಂತ್ರ್ಯಾನಂತರದ ವಿಮರ್ಶೆಗೂ ಹಾಗೂ ಇಪ್ಪತ್ತನೆಯ ಶತಮಾನದ ಕೊನೆಯ ದಶಕ ಮತ್ತು ಇಪ್ಪತ್ತೊಂದನೆಯ ಮೊದಲ ದಶಕದ ವಿಮರ್ಶೆಗೂ ವಿಮರ್ಶೆಯ ಸ್ವರೂಪದಲ್ಲಿ ಕೆಲವು ಭಿನ್ನತೆಗಳಿವೆ. ಆದರೂ ಇವುಗಳಿಗೆಲ್ಲ ಆಳದಲ್ಲಿ ಅತ್ಯಂತ ನಿಕಟವಾದ ಅಂತಃಸ್ಸಂಬಂಧ ಹಾಗೂ ಸಾತತ್ಯವಿದೆ. ಈ ಎಲ್ಲಾ ಘಟ್ಟಗಳಲ್ಲೂ ಪ್ರಾಚೀನ ಸಾಹಿತ್ಯ ಮತ್ತು ಆಧುನಿಕ ಸಾಹಿತ್ಯದ ಕೃತಿಗಳಿಂದ ವಿಮರ್ಶೆಯು ತನ್ನ ಪರಿಕರಗಳನ್ನು ಕಟ್ಟಿಕೊಂಡಿದೆ. ಪಾಶ್ಚಾತ್ಯ ವಿಮರ್ಶೆ ಮತ್ತು ಭಾರತೀಯ ಕಾವ್ಯ ಮೀಮಾಂಸೆಗಳ ಪ್ರಭಾವವು ಮುಖ್ಯವಾಗಿ ಕೆಲಸಮಾಡಿದೆ.

ಪಾಶ್ಚಾತ್ಯ ವಿಮರ್ಶೆಯ ಅನುಸಂಧಾನದಿಂದಾಗಿ ಸಾಹಿತ್ಯವನ್ನು ಕುರಿತ ಹೊಸ ಪರಿಕಲ್ಪನೆಗಳು ಕನ್ನಡಕ್ಕೆ ಬಂದವು. ಪಾಶ್ಚಾತ್ಯ ಸಾಹಿತ್ಯ ವಿಮರ್ಶೆಗೆ ಪ್ಲೇಟೋ ಮತ್ತು ಅರಿಸ್ಟಾಟಲ್‌ರಿಂದ ಹಿಡಿದು ಇಂದಿನವರೆಗೂ ವಾದಸಂವಾದಗಳ, ಸಾಹಿತ್ಯಿಕ ಮೌಲ್ಯಗಳ, ಒಲವುಗಳ, ಸಾಹಿತ್ಯಿಕ ಶ್ರದ್ಧೆ ಮತ್ತು ಬೆಲೆಗಳ ಪುನರ್‌ಮೌಲ್ಯಮಾಪನದ ಒಂದು ಸುದೀರ್ಘ ಚರಿತ್ರೆ ಇದೆ. ಇವೆಲ್ಲ ಕನ್ನಡ ವಿಮರ್ಶೆಯಲ್ಲಿ ಸೃಜನಾತ್ಮಕ ಪರಿಕಲ್ಪನೆಗಳ ದೃಷ್ಟಿಕೋನದಿಂದ ಬಂದಿವೆ. ಕನ್ನಡದಲ್ಲಿ ಸಾಹಿತ್ಯ ವಿಮರ್ಶೆಯು ಕಾಲದಿಂದ ಕಾಲಕ್ಕೆ ಕವಿ, ಕೃತಿಗಳನ್ನು ಕುರಿತು ನಡೆಸಿದ ಚಿಂತನೆ ಹಾಗೂ ಚರ್ಚೆಗಳಿಂದಾಗಿ ಹೊಸ ಮಾದರಿಗಳಲ್ಲಿ ವಿಮರ್ಶೆ ಶುರುವಾಯಿತು. ಶೈಕ್ಷಣಿಕ ಸಂಸ್ಥೆ, ಸಾಹಿತ್ಯಕ್ಕೆ ಮೀಸಲಾದ ಪತ್ರಿಕೆ, ವಿಚಾರ ಸಂಕಿರಣಗಳ ವೇದಿಕೆಗಳಲ್ಲಿ ಸಾಹಿತ್ಯ ವಿಮರ್ಶೆ ತನ್ನ ನಿರಂತರ ಅರಿವನ್ನು ಕಾಯ್ದುಕೊಂಡು ಬಂದಿದೆ. ಇವೆಲ್ಲವುಗಳ ಕಾರ್ಯಚಟುವಟಿಕೆಯಿಂದಾಗಿ ಸಾಹಿತ್ಯ ವಿಮರ್ಶೆಯು ತನ್ನದೇ ಆದ ಪರಂಪರೆಯೊಂದನ್ನು ರೂಪಿಸಿಕೊಂಡಿತು. ಇದರಿಂದಾಗಿ ಕನ್ನಡದಲ್ಲಿ

ಸಾಹಿತ್ಯ ವಿಮರ್ಶೆಗೆ ಈ ವೇದಿಕೆಗಳು ಹೊಸ ಆಯಾಮಗಳನ್ನು ಸೃಷ್ಟಿಸಲು ಕಾರಣವಾಯಿತು. ಈ ರೀತಿಯಾದ ಸಾಹಿತ್ಯಿಕ ಚಿಂತನೆಯಿಂದಾಗಿ ಪರಿಭಾಷೆ, ಪರಿಕಲ್ಪನೆ, ವಿಮರ್ಶಾ ಪ್ರಸ್ಥಾನಗಳು ಬದಲಾಗಿದ್ದನ್ನು ಕಾಣಬಹುದು. ಅಷ್ಟೇಅಲ್ಲ ಕನ್ನಡ ಸಾಹಿತ್ಯ ಘಟ್ಟಗಳ ಅವಧಿಯಲ್ಲಿ ಅನೇಕ ವಿಮರ್ಶಾಭಿನ್ನತೆಗಳನ್ನು ಗುರುತಿಸಬಹುದು.

**ಕನ್ನಡ ಸಾಹಿತ್ಯ ಪಂಥಗಳಲ್ಲಿನ ವಿಭಿನ್ನ ವಿಮರ್ಶಾ ಪರಿಕಲ್ಪನೆಗಳು**

ಸಾಹಿತ್ಯ ಪಂಥವೊಂದಕ್ಕೆ ಅದರದ್ದೇ ಆದ ವಿಮರ್ಶೆಯ ಧೋರಣೆ, ಪರಿಭಾಷೆ, ಪರಿಕಲ್ಪನೆ, ಪರಿಕರಗಳು ಏರ್ಪಡುತ್ತವೆ. ಈ ಪರಿಭಾಷೆಗಳಿಂದಲೇ ಆಯಾ ಪಂಥದ ವಿಮರ್ಶಾ ಸ್ವರೂಪವನ್ನು ಪರಿಚಯಿಸಿಕೊಳ್ಳಬಹುದು. ಉದಾಹರಣೆಗೆ

೧. ನವೋದಯ: ಸೌಂದರ್ಯಕಲ್ಪನೆ, ರಸಾನುಭವ, ಪ್ರಕೃತಿಪ್ರೇಮ, ರಾಷ್ಟ್ರಾಭಿಮಾನ, ಸುಧಾರಣತತ್ವ, ಪುನರುತ್ಥಾನ, ಭಾವೋಲ್ಲಾಸ, ಭವ್ಯತೆ, ಆಧ್ಯಾತ್ಮಿಕ ಮೌಲ್ಯ, ನೈತಿಕಪ್ರಜ್ಞೆ ಮುಂತಾದವು.

೨. ನವ್ಯ: ಸಾವಯವ ಶಿಲ್ಪ, ಭಾಷಾಲಯ, ಪ್ರತಿಮೆ, ಸಂಕೇತ, ಯಾಂತ್ರಿಕತೆ, ತಂತ್ರ, ವ್ಯಕ್ತಿವಿಶಿಷ್ಟತೆ, ಸಂಕೀರ್ಣತೆ, ಪ್ರಾಯೋಗಿಕ ವಿಮರ್ಶೆ, ಪುನರ್‌ಮೌಲ್ಯೀಕರಣ, ಅನಾಥಪ್ರಜ್ಞೆ, ಕರ್ಷಣ, ಶಿಲ್ಪ, ಮತ್ತು ಬಂಧ ಮುಂತಾದವು.

೩. ನವ್ಯೋತ್ತರ: ಸಮಾಜವಾದ, ಸಮತಾವಾದ, ಸಾಮಾಜಿಕ ವಾಸ್ತವ, ಪುನರ್‌ಮೌಲ್ಯೀಕರಣ, ದ್ವಂದ್ವವಿನ್ಯಾಸ, ಬದ್ಧತೆ, ವರ್ಗಸಂಘರ್ಷ, ಜಾತಿಸಂಘರ್ಷ, ಸೈದ್ಧಾಂತಿಕತೆ ಮುಂತಾದವು.

ಪಾಶ್ಚಾತ್ಯ ವಿಮರ್ಶೆಯ ಪ್ರಭಾವದಿಂದಾಗಿ ಕನ್ನಡದಲ್ಲಿ ಈ ಪರಿಭಾಷೆಗಳನ್ನು ಪ್ರಯೋಗಿಸಿದ್ದರೂ ಇವು ಸಂಪೂರ್ಣ ಕನ್ನಡ ವಿಮರ್ಶೆಗೆ ಈಗ ಒಗ್ಗಿಹೋಗಿವೆ. ಕನ್ನಡ ಸಾಹಿತ್ಯ ಸಂದರ್ಭಕ್ಕೆ ತಕ್ಕಂತೆ ಈ ವಿಮರ್ಶಾ ಪರಿಕಲ್ಪನೆಗಳನ್ನು ರೂಪಾಂತರಿಸಿ ಬಳಸಲಾಗಿದೆ. ಆದರೂ ಇಲ್ಲಿ ವಿಭಿನ್ನ ವಿಮರ್ಶಾ ಪರಿಕಲ್ಪನೆಗಳು ಕಾಲಘಟ್ಟದಲ್ಲಿ ಚದುರಿವೆ. ನವೋದಯಕ್ಕಿಂತ ನವ್ಯ, ನವ್ಯಕ್ಕಿಂತ ನವ್ಯೋತ್ತರ ಎಲ್ಲವೂ ವಿಭಿನ್ನ ವಿಮರ್ಶಾ ಸ್ವರೂಪವನ್ನು ಹೊಂದಿವೆ. ಇಂತಹ ವಿಭಿನ್ನತೆ ನವ್ಯದಲ್ಲಿ ಅತಿ ಹೆಚ್ಚು ವ್ಯಾಪಿಸಿತು. ಹಲವು ವಿಮರ್ಶಕರು ಪಾಶ್ಚಾತ್ಯ ನವ್ಯ ವಿಮರ್ಶೆಯ ವಿಧಾನಗಳನ್ನು ಅನುಸರಿಸಿದರು. ಮತ್ತೆ ಕೆಲವರು ಪಾಶ್ಚಾತ್ಯ ನವ್ಯ ವಿಮರ್ಶೆಯ ವಿಧಾನಗಳನ್ನು ತಿಳಿದರೂ ಸಹ ಕನ್ನಡ ಸಾಹಿತ್ಯ ಪರಂಪರೆಯ ಒಳಗಿಂದಲೇ ಪರಿಕಲ್ಪನೆ ರೂಪಿಸಿಕೊಂಡು ವಿಮರ್ಶಿಸಲು ತೊಡಗಿದರು. ಅಂತಹ ವಿಮರ್ಶಕರಲ್ಲಿ ಜಿ.ಎಚ್. ನಾಯಕರು ಒಬ್ಬರು.

## ಕನ್ನಡ ನವ್ಯ ವಿಮರ್ಶೆ ಮತ್ತು ಜಿ.ಎಚ್. ನಾಯಕರು

ಕನ್ನಡ ನವ್ಯ ವಿಮರ್ಶೆ ಬ್ರಿಟಿಷ್ ಮತ್ತು ಅಮೇರಿಕನ್ ರೂಪನಿಷ್ಠ ವಿಮರ್ಶೆಯ ಅನುಕರಣವೆಂದು ಅನೇಕ ಚಿಂತಕರು ಹೇಳುವುದುಂಟು. ಇದು ಮೆಲ್ನೋಟಕ್ಕೆ ಸತ್ಯವೆಂದು ಕಾಣುತ್ತದೆ. ಆದರೆ ಸಂಪೂರ್ಣ ಸತ್ಯವಲ್ಲ. ಕನ್ನಡದ ನವ್ಯ ವಿಮರ್ಶಕರಾದ ಗೋಪಾಲಕೃಷ್ಣ ಅಡಿಗ, ಯು.ಆರ್. ಅನಂತಮೂರ್ತಿ, ಎಂ.ಜಿ. ಕೃಷ್ಣಮೂರ್ತಿ, ಎಚ್.ಎಂ.ಚನ್ನಯ್ಯ ಮೊದಲಾದ ವಿಮರ್ಶಕರು ಪಾಶ್ಚಾತ್ಯ ವಿಮರ್ಶೆಯ ಪರಿಭಾಷೆ ಹಾಗೂ ವಿಧಾನಗಳನ್ನು ಬಳಕೆ ಮಾಡುತ್ತಾರೆ. "ಇಡೀ ಭಾರತೀಯ ವಿಮರ್ಶಾ ಪರಂಪರೆಯೇ ರೂಪನಿಷ್ಠ, ಇನ್ನೊಂದೆಡೆ ಪರಂಪರೆ, ಏಕೀಕೃತ ಸಂವೇದನೆ, ಶಿಲ್ಪ ಮತ್ತು ಬಂಧ, ವ್ಯಂಗ್ಯ- ಇತ್ಯಾದಿ ಪಾಶ್ಚಾತ್ಯ ಪರಿಕಲ್ಪನೆಗಳನ್ನು ಉಪಯೋಗಿಸಿದರೂ ನವ್ಯ ವಿಮರ್ಶೆ ಅವುಗಳನ್ನು ಸಂಪೂರ್ಣವಾಗಿ ಕನ್ನಡದ ಸಂದರ್ಭಕ್ಕೆ ಒಗ್ಗಿಸಿಕೊಂಡಿತು[೧]."ಎಂಬ ಅಭಿಪ್ರಾಯವನ್ನು ಇಲ್ಲಿ ಉಲ್ಲೇಖಿಸಬಹುದು. ಕನ್ನಡದ ಬಹುತೇಕ ವಿಮರ್ಶಕರು ಈ ಪಾಶ್ಚಾತ್ಯ ಪರಿಕಲ್ಪನೆಗಳನ್ನು ನಮ್ಮ ನೆಲದ ಕೃತಿ ಸಂದರ್ಭಕ್ಕೆ ತಕ್ಕ ಹಾಗೆಯೇ ಬಳಸಿಕೊಳ್ಳುತ್ತಾರೆ. ಸಿ.ಎನ್.ರಾಮಚಂದ್ರನ್‌ರವರು " 'ಏಕೀಕೃತ ಸಂವೇದನೆ' ಅನಂತಮೂರ್ತಿ ಯವರು ಹುಟ್ಟುಹಾಕಿದ 'ಬ್ರಾಹ್ಮಣ ಶೂದ್ರ ಪ್ರಜ್ಞೆ' ಯ ರೂಪುತಾಳಿದರೆ, 'ಅಥೆಂಟಿಸಿಟಿ' ಅಡಿಗರು ಮಂಡಿಸಿದ 'ಮಣ್ಣಿನ ವಾಸನೆ' ಯಾಯಿತು. ಎಲಿಯಟ್ ಯೋಜಿಸಿದ ಧಾರ್ಮಿಕ-ಸಾಂಸ್ಕೃತಿಕ 'ಪರಂಪರೆ'ಯ ಪರಿಕಲ್ಪನೆ ಎಂ.ಜಿ.ಕೆ ಅವರಿಗೆ ಪ್ರಧಾನವಾಗಿ 'ಭಾಷಿಕ ನೆಲೆ'ಯಲ್ಲಿ ಅರ್ಥ ಪಡೆದರೆ, ಅನಂತಮೂರ್ತಿಯವರಿಗೆ 'ವೈದಿಕ-ಸಾಹಿತ್ಯಿಕ' ಅರ್ಥತಾಳಿತು. ಕುರ್ತಕೋಟಿಯವರು ಎಲಿಯಟ್‌ನ 'ಪರಂಪರೆ ಮತ್ತು ವ್ಯಕ್ತಿ' ಸಂಕೀರ್ಣ ಸಂಬಂಧ ಮತ್ತು ಟೇನ್ ನ 'ಯುಗಧರ್ಮ'ದ ಪರಿಕಲ್ಪನೆ ಇವೆರಡನ್ನೂ ಒಟ್ಟಿಗೆ ತಂದು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅನೇಕ ಪ್ರಮುಖ ಉಪಪರಂಪರೆ ಗುರುತಿಸಿದರು[೨]" ಎಂದು ಹೇಳುತ್ತಾರೆ.

ಡಿ.ಆರ್. ನಾಗರಾಜ ಮೂಲತಃ ನವ್ಯ ವಿಮರ್ಶೆಯ ಮಾದರಿಯಲ್ಲಿ ವಿಮರ್ಶೆ ಆರಂಭಿಸಿದರು. ('ಅಮೃತ ಮತ್ತು ಗರುಡ' ಸಂದರ್ಭದಲ್ಲಿ) ಸಹ 'ಸಾಹಿತ್ಯ ಕಥನ' ದಿಂದ ನಂತರದಲ್ಲಿ ಅವರು 'ಸಂಸ್ಕೃತಿ' ಚಿಂತನೆಯತ್ತ ತಮ್ಮ ವಿಮರ್ಶೆಯನ್ನು ಹೊರಳಿಸಿದರು. ಅವರು ತಮ್ಮನ್ನು ಸ್ಪಷ್ಟವಾಗಿ ವಸಾಹತೋತ್ತರ ಹಾಗೂ ನವ್ಯೋತ್ತರ ಲೇಖಕರೆಂದು ಗುರುತಿಸಿಕೊಂಡರು. "ನನ್ನ ಒಟ್ಟು ಕೃತಿಯ ಆಶಯಗಳು ವಸಾಹತೋತ್ತರ ಮತ್ತು ನವ್ಯೋತ್ತರ ಚಿಂತನೆಗಳಿಂದ ಪ್ರಭಾವಿತವಾಗಿ ಪ್ರತಿಯಾಗಿ ರೂಪುಗೊಂಡವು[೩]" ಎಂದು ಅವರು ಒಂದು ಕಡೆ ಹೇಳುತ್ತಾರೆ. ಇವುಗಳ ಹಿನ್ನೆಲೆಯಲ್ಲಿ ಹೇಳುವುದಾದರೆ ರಾಜಕೀಯ ಹಾಗೂ ಸಾಮಾಜಿಕ ಚರಿತ್ರೆ ಮತ್ತು ವರ್ಣ,

ವರ್ಗ, ಸಂಘರ್ಷದ ವಾಸ್ತವದ ಚೌಕಟ್ಟಿನಲ್ಲಿಯೇ ತಮ್ಮ 'ಸಾಂಸ್ಕೃತಿಕ ವಿಮರ್ಶೆ' ಯನ್ನು ಅವರು ಪ್ರಾರಂಭಿಸಿದರು ಎನ್ನಬಹುದು.

ಇದರಂತೆ ಜಿ.ಎಚ್. ನಾಯಕರು ಸಹ ನವ್ಯ ವಿಮರ್ಶೆ ಅಥವಾ ರೂಪನಿಷ್ಠ ವಿಮರ್ಶೆಯನ್ನು ಶ್ರದ್ಧೆಯಿಂದ ಅಧ್ಯಯನ ಮಾಡಿಕೊಂಡವರು. ನವ್ಯದ ಪ್ರಾಯೋಗಿಕ ವಿಮರ್ಶೆ, ಮೌಲ್ಯಮಾಪನ, ಕೃತಿನಿಷ್ಠ ವಿಮರ್ಶೆ, ಸಂಸ್ಕೃತಿ ನಿಷ್ಠ ವಿಮರ್ಶೆ, ಚಾರಿತ್ರಿಕ ವಿಮರ್ಶೆಗಳನ್ನೂ ರೂಢಿಸಿಕೊಂಡವರು. ಆದರೆ ಅವರು ಕಾಲ ಕಾಲಕ್ಕೆ ಹೊಸದಾಗಿ ಹುಟ್ಟಿಕೊಳ್ಳುವ ವಿಮರ್ಶೆಯ ಸಿದ್ದಾಂತ, ಪರಿಕಲ್ಪನೆ ಹಾಗೂ ವಿಧಾನಗಳನ್ನು ಪಾಶ್ಚಾತ್ಯ ದೃಷ್ಟಿಕೋನದಿಂದಲೇ ಸ್ವೀಕರಿಸಿದರು ಅನಿಸುವುದಿಲ್ಲ. ನಾಯಕರು ಒಂದು ಕಡೆ ಮಾತನಾಡುತ್ತ "ನವ್ಯದ ಚಿಂತನೆಗಳನ್ನು ಕ್ರೋಢೀಕರಿಸಿ ಕೊಳ್ಳುವಾಗ ಲೀವೀಸ್ ಬಗೆಯ ಚಿಂತನೆ ಬಂದಿರಬಹುದು. ಆದರೆ ಪ್ರತ್ಯೇಕವಾಗಿ ಲೀವೀಸ್ ನನಗೆ ಪ್ರಭಾವಿಸಿಲ್ಲ [೪]" ಎಂದು ಹೇಳುವುದುಂಟು ಆದರು ಸಹ ಎಫ್.ಆರ್. ಲೀವೀಸ್‌ನ ಸಾಹಿತ್ಯ, ಸಾಹಿತ್ಯ ವಿಮರ್ಶೆ, ಸಂಸ್ಕೃತಿ ಮತ್ತು ಪರಂಪರೆಯ ಗ್ರಹಿಕೆಗಳು ನಾಯಕರ ವಿಮರ್ಶೆಯಲ್ಲಿ ಗಮನಾರ್ಹವಾಗಿ ಪ್ರಭಾವಿಸಿರುವುದು ಕಾಣುತ್ತದೆ.

ನಾಯಕರು ತಮ್ಮ ವಿಮರ್ಶಾ ವಿಧಾನಗಳಲ್ಲಿ ಪಾಶ್ಚಾತ್ಯ ವಿಮರ್ಶಾ ದೃಷ್ಟಿಕೋನಗಳನ್ನು ಯಥಾವತ್ತಾಗಿ ಸ್ವೀಕರಿಸಿದ್ದಾರೆಯೇ ಎಂಬ ಪ್ರಶ್ನೆ ಹಾಕಿಕೊಳ್ಳಬೇಕಿದೆ. ಎಂ.ಜಿ. ಕೃಷ್ಣಮೂರ್ತಿಯವರ ವಿಮರ್ಶೆಗೂ ಜಿ.ಎಚ್. ನಾಯಕರ ವಿಮರ್ಶೆಗೂ ಒಂದೇ ರೀತಿಯ ಸಂಬಂಧವಿದೆ ಎಂ.ಜಿ.ಕೃಷ್ಣಮೂರ್ತಿಯವರು ಭಾರತೀಯ ಸಾಹಿತ್ಯ ಪರಂಪರೆಯನ್ನು ಅವಲೋಕಿಸಿ ವಿಮರ್ಶಿಸುತ್ತಾರೆ. ಹಾಗೆಯೇ ನಾಯಕರು ಸ್ವಲ್ಪ ಭಿನ್ನವಾಗಿ ಕನ್ನಡ ಸಾಹಿತ್ಯ ಪರಂಪರೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ವಿಮರ್ಶಿಸುತ್ತಾರೆ. ಆದರೆ ಇವರಿಬ್ಬರಲ್ಲೂ ಲೀವೀಸ್ ವಿಮರ್ಶಾ ಮಾದರಿಯನ್ನು ಕಾಣಬಹುದು[೫]. ನಾಯಕರು ಪಾಶ್ಚಾತ್ಯಾ ವಿಮರ್ಶಾ ಮಾದರಿಯನ್ನು ಅನುಸರಿಸಿ ವಿಮರ್ಶಿಸುತ್ತಾರೆ. ಆದರೆ ಆ ಮಾದರಿಯನ್ನೇ ಮುಖ್ಯವಾಗಿ ಗಣನೆಗೆ ತೆಗೆದುಕೊಳ್ಳುವುದಿಲ್ಲ. ಆಗ ಅವರು ಕನ್ನಡ ಸಾಹಿತ್ಯವನ್ನು ಗಮನಿಸಿ ವಿಮರ್ಶಿಸುತ್ತಾರೆ.

ಡಿ.ಆರ್. ನಾಗರಾಜ ಅವರು "ಲೀವೀಸ್‌ಗೆ ತನ್ನ ದೇಶದ ಇಂಗ್ಲಿಷ್ ಸಾಹಿತ್ಯ ಇಡಿಯಾಗಿ ಒಂದು ಜೀವನ ದೃಷ್ಟಿಯನ್ನೇ ತನ್ನೊಳಗೆ ಪರಿಪೂರ್ಣವಾಗಿ ರೂಪಿಸಬಲ್ಲ ಶಿಸ್ತಾಗಿ ಕಂಡಂತೆ ಸಾಹಿತ್ಯವನ್ನು ಎಂ.ಜಿ.ಕೆ, ಕಾಣಲು ಸಾಧ್ಯವಾಗಿದೆಯೇ? ಇಂಗ್ಲಿಷ್ ಸಾಹಿತಿಗಳಿಗೆ ತಮ್ಮ ಬರವಣಿಗೆ ಸತ್ಯದ ಶೋಧನೆಯೇ ಆದಂತೆ ದಾರ್ಶನಿಕರು ಕಂಡ ಸತ್ಯವನ್ನು ರಸಿಕತೆಯಿಂದ ಗ್ರಹಿಸಿ ನಿವೇದಿಸಲು ನಮ್ಮ ಸಾಹಿತಿಗಳಿಗೆ ಆಗುತ್ತದೆಯೇ?[೬]" ಎಂಬ ಪ್ರಶ್ನೆಯನ್ನು ಎತ್ತುತ್ತಾರೆ. ಈ ಪ್ರಶ್ನೆಯನ್ನು ಎಂ.ಜಿ.ಕೆ

ಅವರಿಗೆ ಮಾತ್ರ ಸೀಮಿತವೆಂದು ಪರಿಭಾವಿಸದೆ ಜಿ.ಎಚ್.ನಾಯಕರ ವಿಷಯದಲ್ಲು ಕೇಳಬಹುದು. ಯಾಕೆಂದರೆ ಲೀವೀಸ್‌ನ ಸಾಹಿತ್ಯ ಪರಿಕಲ್ಪನೆಗಳನ್ನು ನಾಯಕರ ವಿಮರ್ಶೆಯಲ್ಲಿ ಕಾಣಬಹುದಾಗಿದೆ. ಇದಕ್ಕೆ ಪ್ರತಿಯಾಗಿ ನಾಯಕರ ಒಂದು ಹೇಳಿಕೆಯನ್ನು ಗಮನಿಸಬಹುದು: "ಆಶ್ಚರ್ಯ ಏನು ಎಂದರೆ, ನನ್ನ ಇಂಗ್ಲಿಷಿನ ಓದು ಬಹಳ ಕಡಿಮೆ, ನಿಜವಾದ ಅರ್ಥದಲ್ಲಿ ಹೇಳಬೇಕೆಂದರೆ ಲೀವೀಸ್‌ನ್ನ ನಾನು ಸರಿಯಾಗಿ ಓದೇ ಇಲ್ಲ, ಓದಿದ್ದು ಪಾಠ ಮಾಡೋಕೆ ಬಂದಾಗೇನೆ..... ನವ್ಯದ ಚಿಂತನೆ ಕ್ರೋಢೀಕರಿಸಿಕೊಳ್ಳುವಾಗ ಲೀವೀಸ್ ಬಗೆಯ ಚಿಂತನೆ ಬಂದಿರಬಹುದು. ಆದರೆ ಪ್ರತ್ಯೇಕವಾಗಿ ಲೀವೀಸ್ ನನಗೆ ಪ್ರಭಾವ ಬೀರಿಲ್ಲ[೭]". ಹಾಗಾದರೆ ಈ ಪರಿಕಲ್ಪನೆಗಳ ಬಗೆಗಿನ ಚಿಂತನೆಯನ್ನು ಮತ್ತಾವ ಪ್ರಭಾವದಿಂದ ಬಳಸಿರಬಹುದು. ಈ ಸಂದರ್ಭದಲ್ಲಿ ಗಿರಡ್ಡಿಗೋವಿಂದರಾಜರ ಮಾತೊಂದನ್ನು ನೆನೆಯಬಹುದು: "ಹೊಸ ಸಿದ್ಧಾಂತಗಳು ಬಳಕೆಗೆ ತರುವ, ಹೊಸವೆಂಬಂತೆ ಕಾಣುವ ಪರಿಕಲ್ಪನೆಗಳು ಎಲ್ಲೋ ಹೊರಗಿನಿಂದ ರೂಪಿಸಿ ಹೇರಿದುವಲ್ಲ; ಸಾಹಿತ್ಯ ಕೃತಿಗಳಲ್ಲಿ ಮೊದಲಿನಿಂದಲೂ ಅಂತರ್ಗತವಾಗಿದ್ದವುಗಳು.[೮]" ಗಿರಡ್ಡಿಯವರು ಜಿ.ಎಚ್.ನಾಯಕರನ್ನು ಕುರಿತು ಈ ಮಾತನ್ನು ಹೇಳಿಲ್ಲ, ಆದರೆ "ಲೀವೀಸ್‌ನ್ನ ನಾನು ಸರಿಯಾಗಿ ಓದೇ ಇಲ್ಲ, ಲೀವೀಸ್ ನನಗೆ ಪ್ರಭಾವಿಸಿಲ್ಲ, ಇಂಗ್ಲಿಷ್ ಸಾಹಿತ್ಯ ಓದು ಬಹಳ ಕಡಿಮೆ" ಎನ್ನುವ ನಾಯಕರಿಗೆ ವಿಮರ್ಶೆಯಲ್ಲಿ ತೊಡಗಲು ಯಾರು ಪ್ರಭಾವಿಸಿದರು. ನಾಯಕರು ಬಳಸುವ ಪರಿಕಲ್ಪನೆಗಳು ಹೇಗೆ ಬಂದಿವೆ ಎಂಬ ಪ್ರಶ್ನೆಗಳು ಏಳುತ್ತವೆ. ಆಗ ಗಿರಡ್ಡಿಯವರ ಈ ಮಾತು ಎರಡು ರೀತಿಯಲ್ಲಿ ಅರ್ಥವಾಗುತ್ತದೆ. ಒಂದು ಸಾಹಿತ್ಯ ಕೃತಿಗಳಲ್ಲೇ ಪರಿಕಲ್ಪನೆಗಳು ಅಂತರ್ಗತ ವಾಗಿರುತ್ತವೆ ಎಂಬುದು, ಎರಡು ಸಾಹಿತ್ಯ ಕೃತಿಗಳನ್ನು ರಚಿಸಿದ ಕೃತಿಕಾರರ ಗಾಢ ಪ್ರಭಾವ. ಜೊತೆಗೆ ಕಾಲ ಕಾಲಕ್ಕೆ ವಿಮರ್ಶಾ ಮಾದರಿ, ಪರಿಕಲ್ಪನೆ, ಸಿದ್ದಾಂತಗಳು ಬದಲಾಗಲು ಸಾಹಿತ್ಯ ಪಂಥಗಳು ಕೂಡ ಪ್ರಮುಖ ಕಾರಣವಾಗುತ್ತವೆ. ಆ ಪಂಥದ ಮುಖ್ಯ ನೇತಾರರು, ಪ್ರಭಾವಿ ಬರಹಗಾರರು, ಅವರೊಂದಿಗಿನ ಒಡನಾಟ, ಕೃತಿಗಳ ಆಳ ಓದು ಕಾರಣ ಎಂಬುದು. ಈ ಹಿನ್ನೆಲೆಯಲ್ಲಿ ಹೇಳುವುದಾದರೆ ಜಿ.ಎಚ್.ನಾಯಕರಿಗೆ ಕನ್ನಡ ಸಾಹಿತ್ಯ ಪರಂಪರೆಯ ಆಳ ಅಧ್ಯಯನವೂ ಇತ್ತು. ಇಂಗ್ಲಿಷ್ ಸಾಹಿತ್ಯದ ಹಿನ್ನೆಲೆಯ ಎಂ. ಗೋಪಾಲಕೃಷ್ಣ ಅಡಿಗ, ಯು.ಆರ್. ಅನಂತಮೂರ್ತಿಯವರ ಪ್ರಭಾವವೂ ಇತ್ತು. ಜೊತೆಗೆ ಪಾಶ್ಚಾತ್ಯ ನವ್ಯ ವಿಮರ್ಶೆಯ ಸ್ವಲ್ಪ ಓದು ಕೂಡ ಇತ್ತು. ಆದ್ದರಿಂದ ನಾಯಕರಿಗೆ ನವ್ಯ ಸಾಹಿತ್ಯ ವಿಮರ್ಶೆಯ ಕಡೆಗೆ ಒಲವಿತ್ತು. ಅದು ಕನ್ನಡ ಸಾಹಿತ್ಯದ ಹಿನ್ನೆಲೆಯಲ್ಲಿ ಸಾಹಿತ್ಯ, ಸಾಹಿತ್ಯ ವಿಮರ್ಶೆ, ಸಂಸ್ಕೃತಿ ಹಾಗೂ ಪರಂಪರೆಯ ಪರಿಕಲ್ಪನೆಗಳನ್ನು ನಾಯಕರು ಗ್ರಹಿಸಿ ವಿಶ್ಲೇಷಿಸುತ್ತಾರೆ.

## ೨.೧. ಸಾಹಿತ್ಯದ ಪರಿಕಲ್ಪನೆ

ನಿಖರವಾಗಿ, ನಿರ್ದಿಷ್ಟವಾಗಿ ವ್ಯಾಖ್ಯಾನ ಮಾಡದ ಎಷ್ಟೋ ಪರಿಕಲ್ಪನೆಗಳು ಸಾಹಿತ್ಯ ಅಧ್ಯಯನಗಳಲ್ಲಿವೆ. ಅವುಗಳಲ್ಲಿ 'ಸಾಹಿತ್ಯ' ಪರಿಕಲ್ಪನೆಯೂ ಒಂದು. ಸಾಹಿತ್ಯ ಎಂಬ ಪದವನ್ನು ಇಂಗ್ಲಿಷ್‌ನ 'ಲಿಟ್ರೇಚರ್' ಎಂಬುದಕ್ಕೆ ಸಂವಾದಿಯಾಗಿ ಬಳಸುತ್ತಿದ್ದೇವೆ. ಹತ್ತೊಂಬತ್ತನೆಯ ಶತಮಾನಕ್ಕೂ ಪೂರ್ವದಲ್ಲಿ ಕನ್ನಡದಲ್ಲಿ ಕಾವ್ಯ ಪರಿಭಾಷೆಯಲ್ಲೇ ಸಾಹಿತ್ಯದ ಸ್ವರೂಪವನ್ನು ಗುರುತಿಸಲಾಗುತಿತ್ತು. ಈ ಕಾವ್ಯದ ನಂತರದಲ್ಲಿ ಸಾಹಿತ್ಯ ಪರಿಕಲ್ಪನೆ ಬಂದದ್ದು ಆದರೆ ಸಾಹಿತ್ಯ ಎಂಬ ಪರಿಕಲ್ಪನೆಗೆ ಅರ್ಥವನ್ನು ಖಚಿತವಾಗಿ ವ್ಯಾಖ್ಯಾನಿಸುವುದು ಸಾಧ್ಯವಾಗಿಲ್ಲ.

ಸಾಹಿತ್ಯ ಕಾಲ್ಪನಿಕವಾದದ್ದು, ಆದರೆ ಈ ಲೋಕದ ವಸ್ತು ವಿಷಯಗಳಿಂದ ಹೊರತಾದುದಲ್ಲ. ಈ ಲೋಕದ ಸಂಗತಿಗಳು, ಘಟನೆಗಳು, ಕಾರ್ಯಕಾರಣಗಳು ಲೇಖಕರಿಗೆ ಮೂಲವಸ್ತುಗಳಾದರೂ ಅವುಗಳನ್ನು ಲೇಖಕರು ತಮ್ಮೊಳೊಗಿನ ಭಾವಜಗತ್ತಿನಲ್ಲಿ ಕರಗಿಸಿಕೊಂಡು ತಮ್ಮ ಸೃಜನಶೀಲ ಕ್ರಿಯೆ–ಪ್ರಕ್ರಿಯೆಗಳಿಂದ ವಿಭಿನ್ನ ಸ್ವರೂಪದಲ್ಲಿ ಭಾಷಾ ಮಾಧ್ಯಮದ ಮೂಲಕ ಅಭಿವ್ಯಕ್ತಿಸಿ ಪುನರ್ ಸೃಷ್ಟಿಸುತ್ತಾರೆ. ಈ ಪ್ರಕ್ರಿಯೆಯ ಸೃಜನಾತ್ಮಕ ಕ್ರಿಯೆಯೆ ಸಾಹಿತ್ಯ ಎಂದು ವ್ಯಾಖ್ಯಾನಿಸಬಹುದು.

ಜಿ.ಎಚ್. ನಾಯಕರ ವಿಮರ್ಶೆಯಲ್ಲಿನ ಸಾಹಿತ್ಯ ಕುರಿತ ಗ್ರಹಿಕೆ ಯಾವುದು ಎಂಬುದನ್ನು ಇಲ್ಲಿ ಚರ್ಚಿಸಬೇಕಾಗುತ್ತದೆ. ಕನ್ನಡ ಸಾಹಿತ್ಯ ಪಂಥಗಳು, ಕೃತಿಗಳು, ಕೃತಿಕಾರರು ಹಾಗೂ ಸಾಹಿತ್ಯ ಪ್ರಕಾರಗಳನ್ನು ಅನುಲಕ್ಷಿಸಿ ತಮ್ಮ ವಿಮರ್ಶಾ ನಿಲುವುಗಳನ್ನು ತಾಳುವಾಗ ಸಾಹಿತ್ಯ ಕುರಿತು ಅವರು ವಿಶ್ಲೇಷಿಸುತ್ತಾರೆ. ಸಾಹಿತ್ಯ ಎಂದರೇನು ಎಂದು ವ್ಯಾಖ್ಯಾನಿಸುವುದಕ್ಕಿಂತ ಸಾಹಿತ್ಯ ಪರಿಕಲ್ಪನೆಯ ಬಗ್ಗೆ ಅವರು ಚಿಂತನೆ ನಡೆಸುತ್ತಾರೆ. "ಸಮಕಾಲೀನ ಜೀವನದ ಸೂಕ್ಷ್ಮ ಸಂವೇದನೆ, ಪರಿಸರ ರೂಪಿಸಿದ ಪ್ರಜ್ಞೆ ಮತ್ತು ಭಾಷಾ ವಿನ್ಯಾಸವನ್ನು ಅರ್ಥಪೂರ್ಣವಾಗಿ ಸಂಯೋಜಿಸಿಕೊಂಡು ನಿರ್ಮಾಣವಾಗುವ ಸಾಹಿತ್ಯವೇ ಮೌಲಿಕವಾದುದು" ಎಂಬ ಸ್ಥೂಲ ಗ್ರಹಿಕೆಯಿಂದ ತಮ್ಮ ನಿಲುವುಗಳನ್ನು ಅವರು ತಾಳುತ್ತಾರೆ.

ರಂ. ಶ್ರೀ. ಮುಗಳಿ ಯವರು 'ರಸಾನುಭವದ ಸುಂದರ ಅಭಿವ್ಯಕ್ತಿಯೇ ಸಾಹಿತ್ಯ' ಎಂಬ ನವೋದಯ ಧೋರಣೆಯಲ್ಲಿ ಹೇಳುತ್ತಾರೆ. ಯು.ಆರ್. ಅನಂತಮೂರ್ತಿಯವರು " 'ಸಿನ್ಸಿರಿಟಿ' ಮತ್ತು 'ಕಾಂಪ್ಲೆಕ್ಸಿಟಿ' ಎಂಬ ಎರಡು ಕಲ್ಪನೆಗಳು ಸಾಹಿತ್ಯ ಮತ್ತು ಸಾಹಿತ್ಯ ವಿಮರ್ಶೆಗೆ ಅಗತ್ಯ" ಎಂಬ ನವ್ಯ ದೃಷ್ಟಿಕೋನದಲ್ಲಿ ಹೇಳುತ್ತಾರೆ. ಹೀಗೆ ಈ ಎರಡು ಕಾಲಘಟ್ಟದಲ್ಲಿ ಇಬ್ಬರು ವಿಮರ್ಶಕರು ಸಾಹಿತ್ಯವನ್ನು ಕುರಿತು ವಿಭಿನ್ನವಾಗಿ ಅರ್ಥೈಸುತ್ತಾರೆ. ಅನಂತಮೂರ್ತಿಯವರು ನವ್ಯ ಸಂದರ್ಭದಲ್ಲಿ ರಸಾನುಭವದ ವಿಶೇಷತೆಯನ್ನು ಗಮನದಲ್ಲಿರಿಸಿಕೊಂಡು ಯಥಾರ್ಥತೆ ಮತ್ತು

ಸಂಕೀರ್ಣತೆಯನ್ನು ಕಾಯ್ದಿರಿಸಿಕೊಂಡು ಸಾಹಿತ್ಯ ರಚಿಸುವ ಬಗ್ಗೆ ಹೇಳುತ್ತಾರೆ. ಇದನ್ನು ದಾಮೋದರ್‌ರಾವ್ ಅವರು ಸಾಹಿತ್ಯವನ್ನು ಅವಲೋಕಿಸಿ "ಅನಂತಮೂರ್ತಿಯವರಿಗೆ ಸಾಹಿತ್ಯ, ಒಬ್ಬ ವ್ಯಕ್ತಿ ತನ್ನ ವಿಶಿಷ್ಟ ಅನುಭವದ ಅನುಸಂಧಾನದ ಮೂಲಕ ಸಾಧಾರಣ ಸ್ವರೂಪವನ್ನು ಕಂಡುಕೊಳ್ಳುವ ಮಾರ್ಗ ಮಾತ್ರವಲ್ಲ, ಸಮಾಜದ ಇಂದನ್ನು, ಅದರ ನಾಳೆಯ ಧಾಟಿಯನ್ನು, ರೂಪಿಸುವ ಒಂದು ಪ್ರಬಲ ಸಾಧನವೂ ಆಗಿದೆ. [೧೦]"ಎಂದು ಹೇಳುತ್ತಾರೆ. ಅನಂತಮೂರ್ತಿಯವರ ವಿಮರ್ಶೆಗೆ ಸಮಾಜವನ್ನು ಪ್ರತಿನಿಧಿಸಿ ಪರಂಪರೆಯಲ್ಲಿ ಅನುಸಂಧಾನವಾಗುವ ಗುಣವಿದೆ. ಹಾಗೆಯೇ ಸಂಸ್ಕೃತಿ ನಿಷ್ಠ ಸಂಕೀರ್ಣತೆಯೂ ಬರಹದಲ್ಲಿದೆ ಎಂದು ಗುರುತಿಸುತ್ತಾರೆ. ಮಾತನ್ನು ಮುಂದುವರೆಸುತ್ತಾ ದಾಮೋದರ್‌ರಾವ್ ವಿಮರ್ಶಕನು ಮೌಲ್ಯಮಾಪನದ ಹೊಣೆಗಾರಿಕೆಯಿಂದ ನುಣಚಿಕೊಳ್ಳುವುದನ್ನು ನಾಯಕರು ವಿರೋಧಿಸುತ್ತಾರೆ ಎಂದು ವಿವರಿಸುತ್ತಾರೆ. "ಉನ್ನತವಾದ ಸಂವೇದನೆಯಿಂದ ಪ್ರಾಪ್ತವಾದ ಅನುಭವವನ್ನು ಎಚ್ಚರದ ಸ್ಥಿತಿಯಲ್ಲಿ ಶೋಧಿಸಿ ಭಾಷೆಯಲ್ಲಿ ಸಾಕ್ಷಾತ್ಕಾರಗೊಳಿಸುವುದು ಸಾಹಿತಿಯ ಕೆಲಸ; ಈ ಸಾಹಿತ್ಯ ಕರ್ಮದ ಜ್ಞಾನವೇ ನಾವು ಕೃತಿಯ ಸಾರ್ಥಕತೆಯನ್ನು ನಿರ್ಧರಿಸಲು ಬಳಸುವ ವಿಮರ್ಶಾ ತಂತ್ರಗಳ ತಳಹದಿಯಾಗಬೇಕು ಎಂಬ ದೃಢವಾದ ಅನಿಸಿಕೆ ಜಿ.ಎಚ್. ನಾಯಕರ ಲೇಖನಗಳಲ್ಲಿ, ಅವುಗಳನ್ನು ಒಂದುಗೂಡಿಸುವ ಸೂತ್ರದಂತೆ ಕ್ರಿಯಾಶೀಲವಾಗಿದೆ[೧೧]" ಎನ್ನುತ್ತಾರೆ. ಜತೆಗೆ "ಯಾವುದು ಸಾಚ ಮತ್ತು ಯಾವುದು ಮೋಸ–ಎಂಬುದನ್ನು ಸಾಹಿತ್ಯ ಕೃತಿಪರೀಕ್ಷೆಯಲ್ಲಿ ಕಾಣುವುದೇ ಬಹು ಮುಖ್ಯವೆಂದು ತಿಳಿದಿರುವ ಜಿ.ಎಚ್. ನಾಯಕರ ವಿಮರ್ಶೆ ಈ ದಾರಿಯಲ್ಲಿ ಬೆಳೆದಿದ್ದು ಎನ್ನಬಹುದು[೧೨]" ಎಂದೂ ಹೇಳುತ್ತಾರೆ. ಈ ಮಾತುಗಳು ನಾಯಕರ ವಿಮರ್ಶೆ ಕೃತಿನಿಷ್ಠವಾದದ್ದು ಎಂಬುದನ್ನು ಸೂಚಿಸುತ್ತವೆ. ಹಾಗೆಯೇ ಗ್ರಹಿಸಿ ಆಲೋಚಿಸಿದಾಗ ಸೃಜನಶೀಲ ಸಾಹಿತ್ಯದ ಬಗೆಗೆ ನಾಯಕರಿಗೆ ಅಪಾರ ಒಲವಿದೆ. ಸೃಜನೇತರ ಸಾಹಿತ್ಯದ ಬಗೆಗೆ ಎಲ್ಲೂ ವಿಮರ್ಶೆಯನ್ನು ಮಾಡಿಲ್ಲ ಆದ್ದರಿಂದ ನಾಯಕರ ವಿಮರ್ಶೆಯು ಸಂಪೂರ್ಣ ಸೃಜನಶೀಲ ಸಾಹಿತ್ಯ ಅನುಲಕ್ಷಿಸಿ ಅದೇ ಚೌಕಟ್ಟಿನಲ್ಲೆ ನಡೆಯುತ್ತದೆ.

ನಾಯಕರ ಸಾಹಿತ್ಯದ ಕಲ್ಪನೆಯನ್ನು ಗ್ರಹಿಸುವ ಸಂದರ್ಭದಲ್ಲಿ ಸಮೀಕ್ಷಾತ್ಮಕವಾಗಿ ಇವರ ವಿಮರ್ಶೆಯಲ್ಲಿ ಹುಡುಕಾಟ ನಡೆಸಿದಾಗ ಮಾತ್ರ ಸಾಹಿತ್ಯದ ಕಲ್ಪನೆ ಸ್ಪಷ್ಟವಾಗುತ್ತದೆ. 'ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಮಾರ್ಗಗಳ ಸಂಕ್ಷಿಪ್ತ ಸಮೀಕ್ಷೆ'('ಸಮಕಾಲೀನ'), 'ಸಾಹಿತ್ಯದಲ್ಲಿ ವಿನಯ', 'ಪರಂಪರೆ ಮತ್ತು ಸಮಕಾಲೀನ ಕನ್ನಡ ಸಾಹಿತ್ಯ,' 'ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ನನ್ನ ಅನಿಸಿಕೆಗಳು,' 'ಕನ್ನಡದಲ್ಲಿ ನವ್ಯ ಕಾವ್ಯ; ಪರಿಚಯಾತ್ಮಕ ಸಮೀಕ್ಷೆ,' 'ಕನ್ನಡ ಸಣ್ಣಕತೆ: ಒಲವು ನಿಲುವು,'('ಅನಿವಾರ್ಯ'), 'ಪಾಚೀನ ಮತ್ತು ಆಧುನಿಕ ಕನ್ನಡ ಸಾಹಿತ್ಯ; ಒಂದು ನೋಟ' ('ನಿರಪೇಕ್ಷ'), 'ಹೊಸಗನ್ನಡ ಕವಿತೆ; ಪ್ರಸ್ತಾವನೆ' ('ನಿಜದನಿ') ಮತ್ತು 'ಎಂಭತ್ತರ ದಶಕದ ಸಣ್ಣಕತೆ'

('ಸಕಾಲಿಕ') ಮುಂತಾದ ಲೇಖನಗಳ ಸಂದರ್ಭ ಮತ್ತು ಸ್ವರೂಪವನ್ನು ಗಮನಿಸಿದಾಗ ನಾಯಕರ ಸಾಹಿತ್ಯ ಗ್ರಹಿಕೆಯ ಬಗೆಗೆ ತಿಳಿದು ಬರುತ್ತದೆ. ಆಗ ಅವರ ವಿಮರ್ಶೆಯಲ್ಲಿ ಸಾಹಿತ್ಯದ ಮೌಲ್ಯೀಕತೆ, ಪ್ರಯೋಗಶೀಲತೆ, ಶೋಧನೆ, ಕ್ರಿಯಾಶೀಲತೆ, ಕಾವ್ಯಾಭಿವ್ಯಕ್ತಿ, ಅನುಭವ, ಸೃಜನಶೀಲ ಸಾಹಿತ್ಯಪ್ರಕಾರ, ಸಾಹಿತ್ಯ ಪಂಥಗಳಿಗೆ ಅನುಗುಣವಾಗಿ ಸಾಹಿತ್ಯದ ಗತಿವಿನ್ಯಾಸವನ್ನು ಗುರುತಿಸಬಹುದು. ಭಾಷೆ, ವಸ್ತು, ಅಭಿವ್ಯಕ್ತಿ ಕ್ರಮ, ಸಾಹಿತ್ಯದ ಖಚಿತತೆ, ಮೌಲ್ಯನಿರ್ಣಯಕ್ಕಾಗಿ ಹುಡುಕಾಟ ನಡೆಸುತ್ತಾರೆ ಎಂದು ಅನಿಸುತ್ತದೆ.

**ಸ್ವೋಪಜ್ಞ ಕಾವ್ಯದ ಹುಡುಕಾಟ ಮತ್ತು ಗತಿ–ವಿನ್ಯಾಸಗಳ ಚರ್ಚೆ**

ನಾಯಕರು ಪ್ರಾಚೀನ ಸಾಹಿತ್ಯದಿಂದ ನವ್ಯೋತ್ತರ ಸಾಹಿತ್ಯದವರೆಗೂ ಸೃಜನಶೀಲ ಸಾಹಿತ್ಯದಲ್ಲಿ ಅನೇಕ ಗತಿ–ವಿನ್ಯಾಸಗಳನ್ನು ಗುರುತಿಸುವ ಪ್ರಯತ್ನ ಮಾಡುತ್ತಾರೆ. ಚಾರಿತ್ರಿಕವಾಗಿ ಭಾಷೆ, ವಸ್ತು, ಅನುಭವ, ಅಭಿವ್ಯಕ್ತಿ ಹಾಗೂ ಸೃಜನಶೀಲತೆ ಪರಿಕಲ್ಪನೆಗಳನ್ನು ಸಾಹಿತ್ಯ ಚರಿತ್ರೆಯ ಸಂದರ್ಭದಲ್ಲಿಟ್ಟು ಅವುಗಳ ಗತಿ–ವಿನ್ಯಾಸಗಳನ್ನು ಅವಲೋಕಿಸುತ್ತಾ ಸಾಹಿತ್ಯ ಪರಿಕಲ್ಪನೆಯ ಬಗ್ಗೆ ಚರ್ಚಿಸುತ್ತಾರೆ. ಕಾವ್ಯದ ಗತಿ–ವಿನ್ಯಾಸಗಳನ್ನು ಪ್ರಾಚೀನ ಮತ್ತು ಆಧುನಿಕ ಕಾವ್ಯಗಳಲ್ಲಿ ವಿಂಗಡಿಸಿ ಗುರುತಿಸುತ್ತಾರೆ.

ಪ್ರಾಚೀನ ಕಾವ್ಯ ಅಥವಾ ಸಾಹಿತ್ಯದಲ್ಲಿ ಜೈನ, ವೀರಶೈವ, ಬ್ರಾಹ್ಮಣ ಸಾಹಿತ್ಯವನ್ನು ನವ್ಯ ವಿಮರ್ಶೆಯ ಪರಧಿಯೊಳಗೆ ನಿಂತುಕೊಂಡು ನಾಯಕರು ಕಾವ್ಯವನ್ನು ಮೌಲ್ಯಮಾಪನ ಮಾಡುತ್ತರೆ. ಜಿ.ಎಚ್. ನಾಯಕರು ಜೈನರ ಲೌಕಿಕ ಮತ್ತು ಧಾರ್ಮಿಕ ಕಾವ್ಯಗಳು ಸ್ವತಂತ್ರ್ಯ ರಚನೆಯ ಸಾಹಿತ್ಯ ಪರಂಪರೆಯನ್ನು ನಿರ್ಮಾಣ ಮಾಡುವಲ್ಲಿ ಸೋತಿದೆ ಎಂದು ನಿರ್ದಾಕ್ಷಿಣ್ಯವಾಗಿ ಹೇಳುತ್ತಾರೆ. ಆದರೆ ವಚನ ಸಾಹಿತ್ಯದ ಬಗೆಗೆ ನಾಯಕರು "ಕ್ರಿಯಾಶೀಲವಾದ ಶರಣರ ಮನಸ್ಸು ಮತ್ತು ಅವರ ವಚನಗಳು ವಸ್ತು, ಅನುಭವ, ಭಾಷೆ, ಪ್ರಕಾರ, ಕಾವ್ಯ ಪರಿಕರ,– ಈ ಎಲ್ಲಾ ದೃಷ್ಟಿಗಳಿಂದಲೂ ಆವರೆಗಿನ ಕನ್ನಡ ಸಾಹಿತ್ಯ ಸಂಪ್ರದಾಯವನ್ನು ಉಪೇಕ್ಷಿಸಿದವು. ಆ ಮೂಲಕ ಕನ್ನಡ ಸಾಹಿತ್ಯದಲ್ಲಿ ಒಂದು ಸ್ವೋಪಜ್ಞ ಸಾಹಿತ್ಯ ಪರಂಪರೆ ನಿರ್ಮಾಣವಾಯಿತು[೧೩]" ಎಂದು ಅಭಿಪ್ರಾಯ ಪಡುತ್ತಾರೆ. ನಾಯಕರ ದೃಷ್ಟಿಯಲ್ಲಿ ವೀರಶೈವ ಸಾಹಿತ್ಯ ಸ್ವತಂತ್ರವಾಗಿದ್ದು ಮಾತ್ರವಲ್ಲ ವಿಶ್ವ ಸಾಹಿತ್ಯ ಸಂದರ್ಭದಲ್ಲಿಯೇ ವಿಶಿಷ್ಟ ಬಗೆಯದಾಗಿದೆ. ಆದರೆ ಜೈನ, ಬ್ರಾಹ್ಮಣ ಸಾಹಿತ್ಯವು ವರ್ತಮಾನದ ವಾಸ್ತವ ಪ್ರಂಪಚ ಮತ್ತು ಸಾಹಿತ್ಯದ ಒಳಗಿನ ಪ್ರಪಂಚವಾಗಲಿಲ್ಲ. ಆದರೆ ವಚನ ಸಾಹಿತ್ಯ ಮಾತ್ರ ಕ್ರಾಂತಿಕಾರಕ ರೀತಿಯಲ್ಲಿ ಸ್ವತಂತ್ರ ಸೃಜನಶೀಲ ಸಾಹಿತ್ಯವನ್ನು ಸೃಷ್ಟಿಸಿತು. ನಾಯಕರ ಚಾರಿತ್ರಿಕ ದೃಷ್ಟಿಕೋನ ಮತ್ತು ಪರಂಪರೆಯ ಅರಿವು ಇರುವುದು ಇಂತಹ ಸ್ವೋಪಜ್ಞತೆಯ ಸಾಹಿತ್ಯದ ಕಲ್ಪನೆಯ ಕಡೆ.

ಆಧುನಿಕ ಸಾಹಿತ್ಯದಲ್ಲಿ ಕಾವ್ಯವನ್ನು ನವೋದಯ, ನವ್ಯ, ಬಂಡಾಯ ಕಾವ್ಯವೆಂದು ಗುರುತಿಸಿಕೊಂಡು ಕ್ರಮವಾಗಿ ಭಾವ ಪ್ರಧಾನ ಕಾವ್ಯ, ಚಿಂತನ ಪ್ರಧಾನ ಕಾವ್ಯ, ಜನಪರ ಪ್ರಧಾನ ಕಾವ್ಯ, ಎಂದು ನಾಯಕರು ವಿಭಾಗಿಸುತ್ತಾರೆ. ಕನ್ನಡ ಸಾಹಿತ್ಯದ ಬಗೆಗೆ ಸಾಹಿತಿಗಳಲ್ಲಿ ಅನೇಕ ಚಿಂತನೆಗಳು ನಡೆದು ಕಾಲ ಕಾಲಕ್ಕೆ ಸಾಹಿತ್ಯದ ವಸ್ತು, ಅಭಿವ್ಯಕ್ತಿ, ರಚನೆ, ಶಿಲ್ಪ, ಬಂಧ, ನಿರೂಪಣೆಯಲ್ಲಿ ವ್ಯತ್ಯಾಸಗಳಾಗಿರುವುದನ್ನು ಕಾವ್ಯದ ಸ್ವೋಪಜ್ಞತೆ ದೃಷ್ಟಿಯಿಂದ ಗ್ರಹಿಸಬಹುದು. ಈ ಕುರಿತು ನಾಯಕರು ಹೀಗೆ ಹೇಳುತ್ತಾರೆ: "ಜೈನ, ವೀರಶೈವ, ವೈದಿಕ ಕಾವ್ಯಗಳ ಜನಪರ ಪರಿಕಲ್ಪನೆ ಮೂಲತಃ ಜನತೆಯ ಧಾರ್ಮಿಕ ಉದ್ಧಾರ ಕುರಿತದ್ದು, ಅದು ಇಹಕ್ಕಿಂತ ಪರವನ್ನು ಕುರಿತ ಚಿಂತನೆಯನ್ನು ಪ್ರಧಾನವಾಗಿ ತುಂಬಿಕೊಂಡಿದ್ದು, ಹೊಸಗನ್ನಡದ ಜನಪರ ಕಾವ್ಯಗಳು ಪೂರ್ಣವಾಗಿ ಇಹ ಬದ್ಧವಾದವು. ನವೋದಯದ ಜನಪರ ರಾಷ್ಟ್ರೀಯ ಜಾಗೃತಿಯ ಹಿನ್ನಲೆಯಿದ್ದು........ ನವ್ಯದ ಜನಪರ ಪರಿಕಲ್ಪನೆ ಪ್ರಧಾನವಾಗಿ ಸ್ವಾತಂತ್ರ್ಯೋತ್ತರ ಕಾಲದ ನಮ್ಮ ರಾಷ್ಟ್ರೀಯ ಜೀವನದಲ್ಲಿ ವ್ಯಕ್ತಿ ಸ್ವಾತಂತ್ರ್ಯ ಮತ್ತು ವಾಸ್ತವಿಕ ದೃಷ್ಟಿಕೋನದ ಅಗತ್ಯವನ್ನು ಪ್ರತಿಪಾದಿಸುವುದಕ್ಕೆ ಸಂಬಂಧಿಸಿದ್ದು....... ಬಂಡಾಯದ ಜನಪರ ಪರಿಕಲ್ಪನೆ ಪ್ರಧಾನವಾಗಿ ಹಿಂದೂ ಧರ್ಮದ ಶ್ರೇಣೀಕೃತ ಜಾತಿ ವ್ಯವಸ್ಥೆಯಲ್ಲಿ ಕೀಳೆಂದು ಪರಿಗಣಿತವಾಗಿದ್ದ ದಲಿತರು, ಆರ್ಥಿಕ ಅಸಮಾನತೆಯುಳ್ಳ ಮತ್ತು ಅದಕ್ಕೆ ಪ್ರೋತ್ಸಾಹಕವಾದ ಸಮಾಜವ್ಯವಸ್ಥೆಯಲ್ಲಿ ತುಳಿತಕ್ಕೆ ಒಳಗಾದ ಬಡವರು ಹಾಗೂ ದುರ್ಬಲ ವರ್ಗಕ್ಕೆ ಸೇರಿದ ಸ್ತ್ರೀಯರು, ಅಲ್ಪಸಂಖ್ಯಾತರು, ಕಾರ್ಮಿಕರು, ಇಂಥವರಿಗೆಲ್ಲ ಸಲ್ಲಬೇಕಾದ ನ್ಯಾಯ ಮತ್ತು ಸಮಾನತೆಗಾಗಿ ನಡೆಸಬೇಕಾದ ಸಮತಾವಾದದ ಹಿನ್ನಲೆಯಲ್ಲಿ ರೂಪಿತವಾದಂಥ ಹೋರಾಟ ಕುರಿತದ್ದು[೧೪]" ಈ ಹೇಳಿಕೆಯನ್ನು ಗಮನಿಸಿದಾಗ ನಾಯಕರಿಗೆ ಸಾಹಿತ್ಯದ ಹುಟ್ಟು ಸ್ವೋಪಜ್ಞತೆಯಿಂದ ಅನಾವರಣಗೊಳ್ಳಬೇಕು. ಹಾಗೇ ಜನಿತವಾದ, ಅನುಭವಗಳನ್ನು ಅಭಿವ್ಯಕ್ತಿಯ ಅನಿವಾರ್ಯತೆಯಲ್ಲಿ ಸಂಭವಿಸುವಂತೆ ಮಾಡಬೇಕು. ಹೀಗೆ ಗತಿ-ವಿನ್ಯಾಸಗಳಲ್ಲಿ ಬದಲುಗೊಂಡು ರಚಿತಗೊಳ್ಳುವ ಸಾಹಿತ್ಯ ಶ್ರೇಷ್ಠ ಕೃತಿಯಾಗುತ್ತದೆ ಎನ್ನುವ ಮನೋಭಿಲಾಷೆ ನಾಯಕರಿಗೆ ಇದೆ. ಸಾಹಿತ್ಯವು ಗತಿಶೀಲ ಮಾರ್ಗದಲ್ಲಿ ಚಲಿಸಿ, ಹೊಸ ಆಯಾಮಗಳನ್ನು ಸಂಸ್ಕರಿಸಿ, ಶೋಧಿಸಿ, ಸಾಧಿಸುವ ಕಡೆಗೆ ಮುನ್ನಡೆಯಬೇಕು. ಅಷ್ಟೇ ಅಲ್ಲ ಅಭಿವ್ಯಕ್ತಿಯ ಹೊಸ ಸಾಧ್ಯತೆಗಳನ್ನು ಅಳವಡಿಸಿಕೊಳ್ಳಬೇಕು. ಕನ್ನಡದ ನವ್ಯ ಕಾವ್ಯವು ನವೋದಯ ಮತ್ತು ಪ್ರಗತಿಶೀಲ ಸಂದರ್ಭದಲ್ಲಿ ಉಂಟಾದ ಸ್ಥಗಿತತೆ, ಅನುಕರಣಶೀಲತೆಗಳನ್ನು ನಿವಾರಿಸಿಕೊಂಡಿತು. ಇದನ್ನು ಯಶಸ್ವಿಯಾಗಿ ಸಾಧಿಸಿದ್ದು ನವ್ಯ ಕಾವ್ಯ ಎಂಬುದೇ ನಾಯಕರ ಅಭಿಪ್ರಾಯ. ಹಾಗೆಯೇ ನವ್ಯ ಕಾವ್ಯಮಾರ್ಗ ರಚನೆಗೊಂಡ ಐತಿಹಾಸಿಕ ಅನಿವಾರ್ಯತೆಯನ್ನು ನಾಯಕರು ಪ್ರೀತಿಯಿಂದಲೇ ಸ್ವಾಗತಿಸುತ್ತಾರೆ.

**ಕಥನ ಸಾಹಿತ್ಯದಲ್ಲಿನ ವಸ್ತು ಮತ್ತು ರಚನಾ ಭಿನ್ನತೆಗಳು**

ಅಡಿಗರಿಂದ ಉದ್ಘಾಟಿತವಾದ ನವ್ಯ ಪರಂಪರೆಯು ಕತೆ, ಕಾದಂಬರಿ, ನಾಟಕಗಳನ್ನು ತನ್ನ ಕಕ್ಷೆಗೆ ಸೇರಿಸಿಕೊಂಡಿತು. ಇದನ್ನು ನಾಯಕರು ತಮ್ಮ ವಿಮರ್ಶೆಯಲ್ಲಿ ನವೋದಯ ಸಾಹಿತ್ಯ ಕೃತಿಗಳು ಆಕೃತಿಯಲ್ಲಿ ಸೋತಿರುವುದನ್ನು ಪ್ರಸ್ತಾಪಿಸುತ್ತಾರೆ. ಸಾಹಿತ್ಯ ಕೃತಿಯೊಂದು ಅನುಭವ, ವಿಚಾರಗಳು ಶೋಧನೆಗೆ ಒಳಗಾಗದೆ, ಸರಳವಾಗಿ, ಭೋಳೆಯಾಗಿ ಸಿದ್ಧಸೂತ್ರಗಳೊಂದಿಗೆ ಅಭಿವ್ಯಕ್ತವಾಗುವ ಬಗೆಗೆ ನಾಯಕರಿಗೆ ಅಸಮಾಧಾನ, ಅತೃಪ್ತಿ ಇದೆ. ಹಾಗೆಯೇ ಸಾಹಿತ್ಯವು ಅನೇಕ ಕಾಲ ಕ್ರಿಯಾಶೀಲ, ಮೌಲ್ಯೀಕತೆಯ ಸೃಜನ ಸಾಹಿತ್ಯವಾಗಿರಬೇಕು. ಪರಂಪರೆಯಲ್ಲಿ ದಾಖಲುಗೊಳ್ಳಬೇಕು. ಭಾಷೆಯಲ್ಲಿ ಹಿಡಿತ, ವಸ್ತುವಿನಲ್ಲಿ ಹೊಸ ಶೋಧನಾ ಪ್ರಕ್ರಿಯೆ, ವೈಯುಕ್ತಿಕ ಅನುಭವ, ಪರಂಪರಾಗತ ಮೌಲ್ಯ, ವರ್ತಮಾನ ಮತ್ತು ಭೂತದ ವೈಚಾರಿಕ ನಿಲುವುಗಳು ಸ್ಪಷ್ಟಮಾಡಿಕೊಂಡು ಕಥನ ರಚನೆಗೊಳ್ಳಬೇಕೆಂಬ ಆಶಯವಿದೆ. ಹೀಗೆ ಸೃಜನಾತ್ಮಕ ಸಾಹಿತ್ಯ ರಚನೆಗೊಳ್ಳಬೇಕಾದ ಧೋರಣೆಯನ್ನು ಕಥನ ಸಾಹಿತ್ಯದಲ್ಲಿ ನಾಯಕರು ಶೋಧಿಸುತ್ತಾರೆ.

ಜಿ.ಎಚ್. ನಾಯಕರು ಕನ್ನಡ ಸಾಹಿತ್ಯ ಪರಂಪರೆ ಮತ್ತು ಅದರಲ್ಲಿನ ಮುಖ್ಯ ಬರಹಗಾರರ ಸಾಹಿತ್ಯವನ್ನು ಕುರಿತು ಸುದೀರ್ಘವಾಗಿ ಚರ್ಚಿಸುತ್ತಾರೆ. ಹೀಗೆ ಚರ್ಚಿಸುವಾಗ "ಗೋಪಾಲ ಕೃಷ್ಣ ಅಡಿಗರ ಕಾವ್ಯದಲ್ಲಿ ಕುವೆಂಪು ಅವರಲ್ಲಿ ತೋರುವ ಆಧ್ಯಾತ್ಮಿಕ ತುಯ್ತ, ಮಾಸ್ತಿಯವರ ಧಾರ್ಮಿಕತೆ, ಕಾರಂತರಲ್ಲಿ ಕಂಡುಬರುವ ವೈಯುಕ್ತಿಕ ಬದುಕಿನಲ್ಲಿ ದಕ್ಕುವ ವಾಸ್ತವತೆಯ ನಿಷ್ಠುರ ಪ್ರಜ್ಞೆ– ಈ ಮೂರು ಅಂಶಗಳು ಏಕ ಕಾಲದಲ್ಲಿ ಚುರುಕಾಗಿ ಸೃಜನಕ್ರಿಯೆಯ ದಿವ್ಯಕ್ಕೆ ಒಡ್ಡಿಕೊಳ್ಳುತ್ತವೆ. ಅನುಭವ ಅಭಿವ್ಯಕ್ತಿಯ ಅನಿವಾರ್ಯ ಸಂಬಂಧವನ್ನು ಒಪ್ಪಿಕೊಂಡು ಸೃಜನಕ್ರಿಯೆಯಲ್ಲಿ ಅಡಿಗರು ತೊಡಗುತ್ತಾರೆ ಎಂದು ನನಗೆ ಅನಿಸುತ್ತದೆ[೧೫]" ಎಂದು ಅವರು ಹೇಳುತ್ತಾರೆ. ನಾಯಕರು ಇಲ್ಲಿ ಕುವೆಂಪು ಅವರ ಕಾವ್ಯ, ಮಾಸ್ತಿಯವರ ಸಣ್ಣಕತೆ, ಕಾರಂತರ ಕಾದಂಬರಿಗಳನ್ನು ಅವಲೋಕಿಸುತ್ತಾರೆ. ಹಾಗೆ ಮಾಡುವಾಗ ರಚನೆ ಮತ್ತು ವಸ್ತುಗಳಲ್ಲಿ ಭಿನ್ನತೆಗಳನ್ನು ಗುರುತಿಸಿ ಇವೆಲ್ಲವೂ ಸಹ ಅಡಿಗರ ಕಾವ್ಯದಲ್ಲಿ ಅಡಗಿವೆ ಎಂದು ಹೇಳುತ್ತಾರೆ. ಕ್ರಿಯಾಶೀಲನಾದ ಬರಹಗಾರ ಮತ್ತು ಅವನ ಸಾಹಿತ್ಯಿಕ ಮೌಲ್ಯೀಕತೆಯನ್ನು ನಾಯಕರು ಗೌರವಿಸುತ್ತಾರೆ. ಅಂತಿಮವಾಗಿ "ನವೋದಯದ ಸಾಹಿತಿಗಳಿಗಿಂತ ಹೆಚ್ಚಿನ ಮಹತ್ವದ ಸಾಹಿತಿ ಗೋಪಾಲ ಕೃಷ್ಣ ಅಡಿಗರು[೧೬]" ಎಂದು ಹೇಳಿಕೆ ನೀಡುತ್ತಾರೆ. ಹೀಗೆ ಹೇಳುವಾಗ ಅಡಿಗರ ಸೃಜನಕ್ರಿಯೆಯನ್ನು ಉನ್ನತ ಮಟ್ಟದ್ದೆಂದು ಮತ್ತು ಮೌಲ್ಯವುಳ್ಳದ್ದೆಂದು ಭಾವಿಸುತ್ತಾರೆ.

ನಾಯಕರು ನವೋದಯ ಸಾಹಿತ್ಯವನ್ನು ಕುರಿತು ಚರ್ಚಿಸುತ್ತಾರೆ. ಆಗ ಸಾಹಿತ್ಯದಲ್ಲಿ ಮಾಸ್ತಿಯವರ ನಿರೂಪಣೆಯ ಧಾಟಿಯಲ್ಲಿ ನಿರುದ್ವಿಗ್ನತೆ, ಸೃಜನಾತ್ಮಕ ಸಂದರ್ಭದಲ್ಲಿ

ಜೀವನಾನುಭವಗಳನ್ನು ಶೋಧಿಸುವ, ಬದುಕಿನ ಸಾಧ್ಯತೆಗಳನ್ನು ಅನ್ವೇಷಿಸುವ ನಿರಪೇಕ್ಷ ನಿಲುವು ಇಲ್ಲ, ಆನಂದರಿಗೆ ಮಾಸ್ತಿಯವರಿಗಿರುವಂಥ ಸಾಂಸ್ಕೃತಿಕ ಕಾಳಜಿಯಾಗಲಿ, ಧಾರ್ಮಿಕ ಧೋರಣೆಯಾಗಲಿ ಇಲ್ಲ. ಆನಂದರ ಮಟ್ಟದ ಕಲಾತ್ಮಕತೆ ಅಶ್ವತ್ಥರ ಕಥೆಗಳಲಿಲ್ಲ ಎಂದು ಹೇಳುತ್ತಾರೆ. ತಂತ್ರದ ನಾವೀನ್ಯತೆಯ ಬಗೆಗಿನ ಅತ್ಯುತ್ಸಾಹ, ಸಂಕೇತ, ಪ್ರತಿಮೆಗಳ ದುಂದುಗಾರಿಕೆ, ಕಾಮದ ಬಗೆಗಿನ ತರುಣ ಕುತೂಹಲ–ಇವುಗಳಿಂದ ಶರ್ಮರ ಕಥೆಗಳು ಸಾಹಿತ್ಯಿಕ ಮಹತ್ವದಿಂದ ಕೂಡಿರಲಿಲ್ಲ. ಕಲಾತ್ಮಕ ಅಚ್ಚುಕಟ್ಟು ಒಂದನ್ನೇ ಗಮನದಲ್ಲಿಟ್ಟು ಹೇಳುವುದಾದರೆ, ಚಿತ್ತಾಲರು ಬಹುಶಃ ನವ್ಯ ಕಥೆಗಾರರಲ್ಲೆಲ್ಲ ಶ್ರೇಷ್ಠರು. ಶಾಂತಿನಾಥ ದೇಸಾಯಿ, ಯು.ಆರ್. ಅನಂತಮೂರ್ತಿ, ಪಿ.ಲಂಕೇಶ್, ತೇಜಸ್ವಿ ಮೊದಲಾದವರು ಸೃಜನಾತ್ಮಕ ನೆಲೆಗಟ್ಟಿನಲ್ಲಿ ಬರೆಯುತ್ತಾರೆ ಎಂದು ನಾಯಕರು ಹೇಳುತ್ತಾರೆ. ನಾಯಕರು ವಸ್ತು ಮತ್ತು ರಚನೆಯ ಭಿನ್ನತೆಗಳ ಸಂದರ್ಭಗಳನ್ನು ಒಬ್ಬರಿಂದ ಒಬ್ಬರಿಗೆ ಇರುವ ಸಾಧ್ಯತೆಗಳಿಂದ ಗುರುತಿಸುವುದಿಲ್ಲ. ಭಿನ್ನತೆಗಳ ದೃಷ್ಟಿಯಿಂದಲೇ ನಿರೀಕ್ಷಿತ ಸಾಹಿತ್ಯದ ಬೇಡಿಕೆಯನ್ನು ಸೃಜನಶೀಲ ಸಾಹಿತ್ಯ ರಚನೆಯ ವಲಯಕ್ಕೆ ಇಡುತ್ತಾರೆ ಎನಿಸುತ್ತದೆ. ಅಷ್ಟೇ ಅಲ್ಲ ಎಲ್ಲಾ ಸಾಹಿತಿಗಳ ಸಾಹಿತ್ಯ ರಚನೆಯಲ್ಲಿ ಸೃಜನಾತ್ಮಕ ಗುಣಗಳು ಅಭಿವ್ಯಕ್ತಗೊಂಡಿರಬೇಕು. ಯಾವುದೇ ಸಾಹಿತ್ಯಾಂಶದ ಕೊರತೆ ಇರಬಾರದು ಎಂಬ ಧೋರಣೆ ನಾಯಕರಲ್ಲಿದೆ.

ಕಾದಂಬರಿಯ ಸಂದರ್ಭದಲ್ಲಿ ಕಾರಂತರಗಿರುವ ಲೋಕಾನುಭವ ಮತ್ತು ವೈಚಾರಿಕತೆಯನ್ನು ನಾಯಕರು ಗುರುತಿಸುತ್ತಾರೆ. ಅವರ ಕಾದಂಬರಿಗಳಲ್ಲಿ ಈ ನೆಲೆಗಳು ಕಲಾತ್ಮಕವಾಗಿ ಮೈದಳೆಯದೇ ಉಳಿಯುವುದಲ್ಲ ಎಂದು ಅವರು ಗ್ರಹಿಸುತ್ತಾರೆ. ನಾಯಕರು ನವ್ಯದ ಕತೆ–ಕಾದಂಬರಿಕಾರರಿಗಿರುವ ಸೃಜನಶೀಲತೆಯನ್ನು ದುಡಿಸಿಕೊಳ್ಳುವ ಕಲ್ಪನೆ, ವ್ಯವಧಾನ ಕಾರಂತರಿಗಿಲ್ಲದಿರುವುದನ್ನು ಗುರುತಿಸುತ್ತಾರೆ. ಹಾಗೆಯೇ ನವ್ಯರು ಕಾರಂತರ ಲೋಕಾನುಭವವನ್ನು, ಅನುಕರಣೆಯೆನಿಸಿದ ವೈಚಾರಿಕತೆಯನ್ನು ಅಳವಡಿಸಿಕೊಳ್ಳದಿದ್ದರೆ ನವ್ಯಕ್ಕೆ ಭವಿಷ್ಯವಿಲ್ಲವೆಂದೂ ಎಚ್ಚರಿಸುತ್ತಾರೆ.

ಒಟ್ಟಿನಲ್ಲಿ ನಾಯಕರಿಗೆ ಭಾಷೆಯನ್ನು ಅನುಭವ ಅಭಿವ್ಯಕ್ತಿಗೆ ದುಡಿಸಿಕೊಂಡು ಸೃಜನಶೀಲ ಕ್ರಿಯೆಯಿಂದ ರಚಿತವಾದ ಮಾಧ್ಯಮವೇ ಸಾಹಿತ್ಯ. ರಚನೆಯ ಸಂದರ್ಭ, ಸನ್ನಿವೇಶ, ಸಂಕೀರ್ಣ ಸ್ವರೂಪ, ಸಾರ್ಥಕ ಅಂಶಗಳ ಗಮನಿಸಿ ಮತ್ತು ಇತರ ಕೃತಿಗಳ ಬಗೆಗೆ ಎಚ್ಚರ ವಹಿಸಿ ಪ್ರಜ್ಞಾಪೂರ್ವಕವಾಗಿ ಶ್ರೇಷ್ಠ ಸಾಹಿತ್ಯವನ್ನು ಲೇಖಕನು ರಚಿಸಬೇಕೆಂಬ ಕಲ್ಪನೆ ಅವರದ್ದು ಎಂದು ತಿಳಿಯುತ್ತದೆ.

## ೨.೨ ಸಾಹಿತ್ಯ ವಿಮರ್ಶೆ

ಕನ್ನಡ ಸಾಹಿತ್ಯ ವಿಮರ್ಶೆ ಇಪ್ಪತ್ತನೆಯ ಶತಮಾನದ ಎರಡನೆಯ ದಶಕದಿಂದ ಬೆಳವಣಿಗೆಗೊಂಡಿದೆ. ಇಂಗ್ಲಿಷಿನ 'ಕ್ರಿಟಿಸಿಸಂ' ಪದಕ್ಕೆ ಸಮಾನವಾದ ಕನ್ನಡಪದ 'ವಿಮರ್ಶೆ' ಇಂಗ್ಲಿಷಿನಲ್ಲಿ 'ಲಿಟರೆರಿ ಕ್ರಿಟಿಸಿಸಂ' ವೈವಿಧ್ಯಮಯವಾಗಿ ಬೆಳೆದಿದೆ. ಕನ್ನಡದಲ್ಲಿ 'ಸಾಹಿತ್ಯ ವಿಮರ್ಶೆ' ಇನ್ನೂ ಬೆಳೆಯುತ್ತಲೇ ಇದೆ. ಒಂದು ಸಾಹಿತ್ಯ ಕೃತಿಯನ್ನು ಪರೀಕ್ಷಿಸಿದ ನಂತರ ಆ ಕೃತಿಯ ಮೌಲ್ಯ ನಿರ್ಣಯವಾಗುತ್ತದೆ. ಇಂತಹ ಪರೀಕ್ಷೆಯ ನೆಲೆಗಳೇ ವಿಮರ್ಶೆಯ ಮೂಲ ತತ್ವಗಳಾಗಿವೆ.

ಕನ್ನಡ ಸಾಹಿತ್ಯ ವಿಮರ್ಶೆಯನ್ನು ಗಮನಿಸಿದಾಗ ರಸಗ್ರಹಣ, ರಸಾವಿಷ್ಕರಣೆ, ವಿಶ್ಲೇಷಣೆ, ಮೌಲ್ಯನಿರ್ಣಯ ಈ ನಾಲ್ಕು ಅಂಶಗಳು ಅದರ ಎಲ್ಲ ಘಟ್ಟದಲ್ಲೂ ಒಂದಿಲ್ಲೊಂದು ಬಗೆಯಲ್ಲಿ ಇದ್ದೇ ಇರುತ್ತವೆ. ವಿಮರ್ಶಾ ವಿಧಾನಗಳು ಮತ್ತು ವಿಮರ್ಶಾ ದೃಷ್ಟಿಕೋನಗಳು ಬದಲಾದಂತೆ ವಿಮರ್ಶಿಸುವ ರೀತಿಯು ಬದಲಾಗಬಹುದು. ಟಿ.ಎಸ್.ಎಲಿಯಟ್ "ಕಾಲದಿಂದ ಕಾಲಕ್ಕೆ ಪ್ರತಿನೂರು ವರ್ಷಕ್ಕೊಂದು ಸಲವಾದರೂ ಸಾಹಿತ್ಯ ಕೃತಿಗಳನ್ನು ಹೊಸ ಕ್ರಮದಲ್ಲಿ ನೆಲೆಗೊಳಿಸುವುದು ಅಗತ್ಯವಾಗಿದೆ" ಎಂದು ಹೇಳುತ್ತಾರೆ. ಅವನ ಈ ಮಾತು ಹೊಸ ವಿಮರ್ಶಾ ವಿಧಾನದ ಅಗತ್ಯವನ್ನು ಪ್ರತಿಕ್ರಿಯಾತ್ಮಕವಾಗಿ ರೂಪಿಸಬಲ್ಲದು. ಹೀಗೆ ವಿವಿಧ ಕಾಲಘಟ್ಟಗಳಲ್ಲಿ, ವಿವಿಧ ವಿಮರ್ಶಕರು ಹಲವು ವಿಮರ್ಶಾ ವಿಧಾನಗಳನ್ನು ಅನುಸರಿಸಿದರು.

ಕುವೆಂಪು, ತೀ.ನಂ.ಶ್ರೀ. ದ.ರಾ.ಬೇಂದ್ರೆ, ಮಾಸ್ತಿ, ಎ.ಎನ್.ಮೂರ್ತಿರಾವ್ ಮೊದಲಾದವರು ನವೋದಯ ವಿಮರ್ಶೆಯ ಸ್ವರೂಪವನ್ನು, ಎಂ.ಜಿ. ಕೃಷ್ಣಮೂರ್ತಿ, ಯು.ಆರ್. ಅನಂತಮೂರ್ತಿ, ಗಿರಡ್ಡಿ ಗೋವಿಂದರಾಜ, ಜಿ.ಎಚ್. ನಾಯಕ, ಎಚ್.ಎಂ.ಚನ್ನಯ್ಯ, ಶಾಂತಿನಾಥ ದೇಸಾಯಿ, ಮೊದಲಾದವರು ನವ್ಯ ಸಾಹಿತ್ಯ ವಿಮರ್ಶೆಯ ಸಂದರ್ಭದಲ್ಲಿ, ಪೂರ್ಣಚಂದ್ರ ತೇಜಸ್ವಿ, ಬಿ.ಕೃಷ್ಣಪ್ಪ, ಡಿ.ಆರ್.ನಾಗರಾಜ, ಬರಗೂರು ರಾಮಚಂದ್ರಪ್ಪ, ಅರವಿಂದ ಮಾಲಗತ್ತಿ, ಮ.ನ.ಜವರಯ್ಯ, ಸುಮಿತ್ರಾಬಾಯಿ, ಕೆ.ವಿ. ನಾರಾಯಣ ಮೊದಲಾದವರು ನವ್ಯೋತ್ತರದ ಸಾಹಿತ್ಯ ವಿಮರ್ಶೆಯ ಸ್ವರೂಪದಲ್ಲಿ ತಮ್ಮ ವಿಮರ್ಶಾ ನೆಲೆಗಳನ್ನು ಕಂಡುಕೊಂಡರು.

"ವಿಮರ್ಶೆ ಸತ್ಯವಾದ ನಿರ್ಣಯಗಳಿಗಾಗಿ ನಡೆಸುವ ಸಾಮೂಹಿಕ ಶೋಧ[೧೭]" ಎಂತಲೂ "ವಿಮರ್ಶೆ ಎಂದರೆ ಸಾಹಿತ್ಯವನ್ನು ಕುರಿತ ತತ್ವ ಮತ್ತು ವಿಶ್ಲೇಷಣಾ ವಿಧಾನ[೧೮]" ಎಂಬ ವಿಭಿನ್ನ ಅಭಿಪ್ರಾಯಗಳಿಗೆ ಹಾಗೆಯೇ ಭಿನ್ನ ಭಿನ್ನ ವಿಮರ್ಶಾ ವಿಧಾನಗಳು ಸಹ ಚಾಲ್ತಿಯಲ್ಲಿವೆ. ಹೀಗೆ ಕನ್ನಡ ವಿಮರ್ಶೆ ಹಲವು ಬಿಕ್ಕಟ್ಟುಗಳನ್ನು ಎದುರಿಸುತ್ತಾ ಬಂದಿದೆ. ಅದು ಕಾಲಕ್ಕೆ ಮುಖಾಮುಖಿ ಯಾಗಿ ರೂಪಗೊಳ್ಳುತ್ತಾ ವಿಮರ್ಶೆಯ ನಿಜದ ಅಸ್ತಿತ್ವ ಉಂಟಾಗುತ್ತದೆ. ಯಾವುದೇ ಒಂದು ಸಾಹಿತ್ಯ

ಪಂಥ ತನ್ನದೇ ಆದ ಆಲೋಚನೆಗಳಿಗೆ ತನ್ನ ಅಸ್ತಿತ್ವವನ್ನು ಸ್ಥಾಪಿಸುತ್ತದೆ. ಈ ಪ್ರಕ್ರಿಯೆಯಲ್ಲಿ ಹೊಸದನ್ನು ಪ್ರತಿಪಾದಿಸುವ, ಪರಿಷ್ಕರಿಸುವ, ಸ್ವೀಕರಿಸುವ ಜೊತೆಗೆ ವಿರೋಧಿಸುವ, ನಿರಾಕರಿಸುವ ಕ್ರಿಯೆ ನಡೆಯುತ್ತದೆ. ಈಗಾಗಲೇ ಪ್ರತಿಷ್ಠಾಪನೆಗೊಂಡದ್ದು ಜಡಗೊಂಡಾಗ ಮತ್ತೊಂದನ್ನು ಸ್ಥಾಪಿಸುವ ಕ್ರಿಯಾತ್ಮಕ ಚಟುವಟಿಕೆ ನಡೆಯುತ್ತಲೇ ಇರುತ್ತದೆ. ಈ ಪ್ರಕ್ರಿಯೆಯಲ್ಲಿ ಹೊಸ ಮಾನದಂಡಗಳು ರೂಪುಗೊಳ್ಳುತ್ತವೆ. ಈಗಾಗಲೇ ಇದ್ದುವು ಬದಲಾಗುತ್ತವೆ. ಈ ಕಾರಣದಿಂದಾಗಿಯೇ ಒಂದು ತಾತ್ವಿಕತೆಯ ಗ್ರಹಿಕೆ ಬದಲಾದಂತೆ ವಿಮರ್ಶೆಯ ನೆಲೆಗಳು ಬದಲಾಗುತ್ತವೆ. ಹಾಗೆ ಬದಲಾವಣೆಗೊಂಡು ಬಂದಂತಹ ಕಾಲಘಟ್ಟ ಅಥವಾ ಸಾಹಿತ್ಯ ಪಂಥ ನವ್ಯ. ಈ ಪಂಥದಲ್ಲಿ ನವ್ಯ ವಿಮರ್ಶೆ ಉಳಿದ ಸಾಹಿತ್ಯ ಪಂಥಗಳಿಗಿಂತ ಭಿನ್ನವಾಗಿ ಮತ್ತು ವಿಶೇಷವಾಗಿ ವಿಮರ್ಶೆಯಲ್ಲಿ ತೊಡಗಿಕೊಂಡಿತು. ಈ ನವ್ಯತೆಯನ್ನು ಕುರಿತು ನಾಯಕರು "ನವ್ಯತೆ ಒಂದು ನಿಲುಮೆ, ನಿಲುಕು,(approch) ಅದೊಂದು ಧೋರಣೆ ಇಲ್ಲವೆ ವಿಶಿಷ್ಟ ಮನೋಧರ್ಮ, ಬಾಳನ್ನು ಬದುಕನ್ನು ನೋಡುವ ಅದರ ಬೆಲೆಕಟ್ಟುವ ಒಂದು ವಿಧಾನ ಅಂದರೆ ಈ ಮೂಲಭೂತವಾದ ಮಾನಸಿಕ ಭೂಮಿಕೆಯಿದ್ದರೆ ಅದು ಇತರ ಕ್ಷೇತ್ರಗಳಂತೆ ವಿಮರ್ಶೆಯ ಕ್ಷೇತ್ರದಲ್ಲಿ ಕೆಲಸ ಮಾಡುತ್ತದೆ[೧೯]" ಎಂದು ನಾಯಕರು ವ್ಯಾಖ್ಯಾನಿಸುತ್ತಾರೆ. ಕನ್ನಡ ನವ್ಯ ವಿಮರ್ಶೆಯು ಪಾಶ್ಚಾತ್ಯ ಮೂಲದ ಚಿಂತನೆಗೆ ಆದ್ಯತೆ ನೀಡಿತು. ಆದರೆ ವಿಮರ್ಶೆಯೊಳಗೂ ಸಹ ಈ ಪಂಥ ಕೃತಿಯೊಳಗೆ ಹೊಕ್ಕು ಅನುಭವಗಳನ್ನು ಹುಡುಕುವ ಭಾಷಾ ಮಾಧ್ಯಮವನ್ನು ಪಳಗಿಸಿಕೊಂಡಿತು. ಹಾಗೆಯೇ ವಿಶಿಷ್ಟ ತಂತ್ರಗಳ ಮೂಲಕ ಮೌಲ್ಯನಿರ್ಣಯ ಮಾಡುವ ಹೊಣೆಗಾರಿಕೆಯನ್ನು ನಿರ್ವಹಿಸಿತು. ಇದನ್ನು ಕುರಿತು ಡಿ.ಆರ್.ನಾಗರಾಜ ಅವರು ಹೀಗೆ "ಅನೇಕ ಸನ್ನಿವೇಶಗಳಲ್ಲಿ ಸರಳ ಮೆಟೀರಿಯಲಿಸ್ಟ್ ವಿಮರ್ಶಕರು ಒಳಗಿನ ಲೋಕಕ್ಕೆ ಪ್ರವೇಶವೇ ಮಾಡದೆ ಸುತ್ತ ಮುತ್ತಲಿನ ಸಂಗತಿಗಳ ಬಗ್ಗೆ ಸಾಮಾಜಿಕವಾಗಿ ಚರ್ಚಿಸಿ ಅದನ್ನೇ ಸಾಹಿತ್ಯ ವಿಮರ್ಶೆ ಎಂದು ಭಾವಿಸುವುದುಂಟು, ಸಾಂಪ್ರದಾಯಿಕ ಸಾಮಾಜಿಕ ವಿಮರ್ಶೆಯ ನ್ಯೂನತೆಗಳು ಕಣ್ಣಿಗೆ ರಾಚುವುದು ಇಲ್ಲಿಯೇ, ಇಂಗ್ಲೀಷ್ ಸಾಹಿತ್ಯದ ಸಂದರ್ಭದಲ್ಲಿ ಲೀವೀಸ್‌ನ ಪಂಥ ಆಗಿನ ಮಾರ್ಕ್ಸ್‌ವಾದೀ ಸಾಹಿತ್ಯ ಚಿಂತನೆಯು ಜಯಗಳಿಸಿದ್ದು ಈ ಕಾರಣಕ್ಕಾಗಿಯೇ[೨೦]" ನಾಗರಾಜ ಅವರ ಮಾತು ನವ್ಯ ಸಾಹಿತ್ಯ ವಿಮರ್ಶೆಯ ವೈಧಾನಿಕತೆಯನ್ನು ಕುರಿತು ಹೇಳುತ್ತದೆ. ಈ ಮಾತನ್ನು ದೃಷ್ಟಿಯಲ್ಲಿಟ್ಟುಕೊಂಡು ಗಮನಿಸಿದರೆ, ನಾಯಕರು ಸಹ ಕೃತಿಯೊಳಗೆ ಆಧಾರಗಳನ್ನು ಹುಡುಕಿ ವಿಮರ್ಶಿಸುವ ಗುಣವನ್ನು ಹೊಂದಿದ್ದಾರೆ ಎಂಬುದನ್ನು ಖಚಿತವಾಗಿ ಹೇಳಬಹುದು. ಒರಟು ಸಮಾಜಮುಖಿ ವಿಮರ್ಶಕರಿಂದ ಸಾಹಿತ್ಯ ಚಿಂತನೆ ಪಾರಾಗಿ ಕೃತಿನಿಷ್ಠತೆಯತ್ತ ತಿರುಗಿತು.

ಲೀವೀಸ್‌ನ ವಿಮರ್ಶಾ ವಿಧಾನವು ಕನ್ನಡ ಸಾಹಿತ್ಯದಲ್ಲಿ ಪ್ರಾರಂಭಗೊಂಡಿತು ಎಂಬುದನ್ನು ಡಿ.ಆರ್. ನಾಗರಾಜ ಅವರು ತಮ್ಮ ಹೇಳಿಕೆಯಲ್ಲಿ ಸಾಂಕೇತಿಕವಾಗಿ ಧ್ವನಿಸುತ್ತಾರೆ.

"ಇಡೀ ಸಾಹಿತ್ಯ ಪರಂಪರೆಯ ಹಿನ್ನೆಲೆಯಲ್ಲಿ ನಿರ್ದಿಷ್ಟ ಕೃತಿಯನ್ನು ಬೆಲೆಗಟ್ಟುವ ಸಮೀಕ್ಷಾಕ್ರಮ, ಅಭಿಪ್ರಾಯ ಮಂಡನೆಯಲ್ಲಿ ವಿಶೇಷ ಎಚ್ಚರ, ತೂಕದ ಕಡೆ ನೆಟ್ಟ ವಿಮರ್ಶನ ಪ್ರಜ್ಞೆ, ಜಿ.ಎಚ್. ನಾಯಕರ ವಿಮರ್ಶೆಯ ಹಿಂದೆ ಕಾರ್ಯೋನ್ಮುಖವಾಗಿದೆ.[೨೧]" ಡಿ.ಆರ್. ನಾಗರಾಜ ಅವರು ಹೇಳಿದ ಲೀವೀಸ್ ಪಂಥವನ್ನು ಜಿ.ಎಚ್ ನಾಯಕರು ಮತ್ತು ಎಂ.ಜಿ.ಕೆ ಪ್ರತಿನಿಧಿಸುತ್ತಾರೆ. ಜಿ.ಎಚ್. ನಾಯಕರು ಲೀವೀಸ್ ಮಾದರಿಯ ವಿಮರ್ಶಾಧೋರಣೆ ಉಳ್ಳವರು ಎಂಬುದನ್ನು ಬಿ.ದಾಮೋದರ್‌ರಾವ್ ಕೂಡ ಹೇಳುತ್ತಾರೆ. ಜಿ.ಎಚ್. ನಾಯಕರ ವಿಮರ್ಶೆಯನ್ನು ಅವಲೋಕಿಸಿದಾಗ ಅವರು ಸಾಹಿತ್ಯ, ಸಂಸ್ಕೃತಿ, ಪರಂಪರೆ, ಕೃತಿನಿಷ್ಠ ವಿಮರ್ಶೆ, ಚಾರಿತ್ರಿಕ ವಿಮರ್ಶೆ ಪ್ರಾಯೋಗಿಕ ವಿಮರ್ಶೆ, ಸಂಸ್ಕೃತಿನಿಷ್ಠ ವಿಮರ್ಶೆ, ಮೌಲ್ಯಮಾಪನ ಮೊದಲಾದ ವಿಮರ್ಶಾ ದೃಷ್ಟಿಕೋನಗಳಿಂದ ಕೃತಿಯನ್ನು ಮೌಲ್ಯೀಕರಿಸುತ್ತಾರೆ. ಕಾಲ ದೇಶಗಳ ಪರಿಮಿತಿಯಲ್ಲಿ ವಿಮರ್ಶೆಯನ್ನು ದೃಷ್ಟಿಸುತ್ತಾರೆ ಎಂದು ತಿಳಿಯುತ್ತದೆ. ಇವರ ಈ ಮಾದರಿಯ ಸ್ವರೂಪದಿಂದಾಗಿಯೇ 'ನವ್ಯ' ಸಂವೇದನೆಯ ಕಡೆ ವಿಮರ್ಶೆಯ ನೋಟವಿದೆ. ಅನುಭವ ಅಭಿವ್ಯಕ್ತಿಯ ಸಮಗ್ರತೆ, ಭಾಷೆಯ ಬಳಕೆ ಮತ್ತು ಮೌಲ್ಯಪ್ರಜ್ಞೆ ನಾಯಕರ ವಿಮರ್ಶೆಯಲ್ಲಿ ಜಾಗೃತವಾಗಿದೆ. ಸಮಕಾಲೀನ ಸಾಹಿತ್ಯದ ಬಗ್ಗೆ ಪುನರ್‌ಮೌಲ್ಯೀಕರಣ ಮಾಡುವಾಗ ವರ್ತಮಾನದ ಸಂವೇದನೆಯನ್ನು ತಳಹದಿಯಾಗಿಟ್ಟುಕೊಂಡು ಮಾಡುವ ಮೌಲ್ಯಮಾಪನ ಮತ್ತು ಐತಿಹಾಸಿಕ ನ್ಯಾಯ ಇವು ನಾಯಕರ ಸಾಹಿತ್ಯ ವಿಮರ್ಶೆಯ ಸ್ವರೂಪದ ಬಗೆಗೆ ಬೆಳಕು ಚೆಲ್ಲುತ್ತವೆ. ಸಾಂಪ್ರದಾಯಿಕ ವಿಮರ್ಶೆಯಿಂದ ದೂರ ಉಳಿದಿದ್ದು ಗಮನಿಸಿದಾಗ ನಾಯಕರಲ್ಲಿ ವಿಮರ್ಶೆಯ ಬಗೆಗಿನ ಕಾಳಜಿ ಶ್ರದ್ಧೆ, ಅಭಿವ್ಯಕ್ತಿಯ ಮಾಧ್ಯಮ ಕಂಡು ಬರುತ್ತದೆ.

ನಾಯಕರು ತಮ್ಮ 'ಸಾಹಿತ್ಯದಲ್ಲಿ ವಿನಯ' ಎಂಬ ಲೇಖನದಲ್ಲಿ ವಿಮರ್ಶೆಯನ್ನು ಕುರಿತು "ಆದರ್ಶ ವಿಮರ್ಶಕನೂ ಸೃಜನಶೀಲ ಸಾಹಿತಿಯ ಸಂದರ್ಭದಲ್ಲಿ ವಿವರಿಸಿದಂಥ ಎಲ್ಲ ಉಪಾಧಿಗಳಿಂದಲೂ ಮುಕ್ತನಾಗಿ ತನ್ನ ಅಧ್ಯಯನಕ್ಕೆ ವಿಷಯವಾದ ಕೃತಿಯಲ್ಲೇ ತನ್ನ ಮನಸ್ಸನ್ನು ಕೇಂದ್ರೀಕರಿಸುತ್ತಾನೆ. ಆ ಕೃತಿ ತನ್ನ ಮನಸ್ಸಿನ ಮೇಲೆ ಮಾಡಿದ ಪರಿಣಾಮವನ್ನು, ಮೌಲ್ಯನಿರ್ಣಯವನ್ನು ಕುರಿತಂತೆ ತನ್ನ ಜೀವನಾನುಭವ ಮತ್ತು ಬದುಕನ್ನು ಕುರಿತ ತನ್ನ ತಿಳಿವಳಿಕೆಯ ಸಂದರ್ಭದಲ್ಲಿ ವಿವೇಚಿಸುತ್ತಾನೆ. ವಿಮರ್ಶೆಯ ಈ ಪ್ರಕ್ರಿಯೆಯಲ್ಲಿಯೂ ಪ್ರಕಟವಾಗುವ ವಿನಯಕ್ಕೆ ನೇತ್ಯಾತ್ಮಕ ಮತ್ತು ಇತ್ಯಾತ್ಮಕ ಮುಖಗಳಿರುತ್ತವೆ. ವಿಮರ್ಶಕನಲ್ಲಿ ವಿನಯದ ನೇತ್ಯಾತ್ಮಕ ಮುಖ ಮಾತ್ರ ಪ್ರಕಟವಾಗಿ ಇತ್ಯಾತ್ಮಕ ಮುಖ ಪ್ರಕಟವಾಗದಿದ್ದಾಗ ಆತ ಬೇರೊಬ್ಬ ವಿಮರ್ಶಕನ

ವಿಮರ್ಶೆಯನ್ನು ಬಹಿಷ್ಕರಿಸುವಂತೆ ಶಿಫಾರಸ್ಸು ಮಾಡಲು ಹೊರಡುತ್ತಾನೆ. ಅದು ಸಾಹಿತ್ಯದಲ್ಲಿ ವಿನಯವಲ್ಲ : ಅವಿನಯ" ಹೀಗೆ ಜಿ.ಎಚ್. ನಾಯಕರು ಸಾಹಿತ್ಯ ಕೃತಿಯಲ್ಲಿನ ವಿನಯವನ್ನು ವಿಶ್ಲೇಷಿಸುವಾಗಲೂ ಸಹ ಸಾಹಿತ್ಯ ವಿಮರ್ಶೆಯ ಬಗ್ಗೆಯೇ ಚರ್ಚಿಸುತ್ತಾರೆ. ಎರಡು ಭಿನ್ನ ನೆಲೆಗಳಾದ 'ನೇತ್ಯಾತ್ಮಕ ಮುಖ' ಮತ್ತು 'ಇತ್ಯಾತ್ಮಕ ಮುಖ' ಗಳು ವಿಮರ್ಶೆಯ ಸ್ವರೂಪವನ್ನು ಪ್ರಕಟಿಸುವ ಪ್ರಕ್ರಿಯೆಗಳಾಗಿ ಬಹು ಮುಖ್ಯವಾದವು. ಇವುಗಳ ಮುಖೇನವೇ ಸಾಹಿತ್ಯ ವಿಮರ್ಶೆಯನ್ನು 'ಸಾಹಿತ್ಯದಲ್ಲಿ ವಿನಯ' ಎಂದು ನಾಯಕರು ಗುರುತಿಸುತ್ತಾರೆ. ಆದರೆ "ನಾಯಕರ ವಿಮರ್ಶೆಯ ಸ್ವರೂಪ ಹೇಗಿರುತ್ತದೆ ಎಂದರೆ ಓದುಗರೇ ಅದು ಹೌದೋ ಅಲ್ಲವೋ ಎಂದು ಪರಿಶೀಲಿಸಿಕೊಳ್ಳುವ ಹಾಗಿರುತ್ತದೆ. ನಾಯಕರ ವಿಮರ್ಶೆ ಎಷ್ಟು ಅಕ್ಷರ ನಿಷ್ಠವೋ ಅಷ್ಟು ಸಂಸ್ಕೃತಿ ನಿಷ್ಠವು ಹೌದು.[೨೩]" ಎನ್ನುವ ಟಿ.ಪಿ.ಅಶೋಕ ಅವರು ನಾಯಕರ ವಿಮರ್ಶೆ ಕೃತಿನಿಷ್ಠವು ಆಗಿರುವುದನ್ನು ಗುರುತಿಸುತ್ತಾರೆ. ಇದರಿಂದಾಗಿ ನಾಯಕರಲ್ಲಿ ಸಂಸ್ಕೃತಿ ನಿಷ್ಠ ವಿಮರ್ಶೆ ವಿಧಾನ ಇದೆ ಎಂಬುದಕ್ಕೆ ಮತ್ತೊಂದು ಸಾಕ್ಷಿ ದೊರೆತಂತಾಗಿದೆ.

## ೨.೪ ಪರಂಪರೆ

ಕನ್ನಡ ಸಾಹಿತ್ಯಕ್ಕೆ ಒಂದು ಸಾವಿರ ವರ್ಷಕ್ಕೂ ಮೀರಿದ ಒಂದು ಪರಂಪರೆಯಿದೆ. ಈ ಸಾಹಿತ್ಯ ಚರಿತ್ರೆಯು ಕಾಲದಿಂದ ಕಾಲಕ್ಕೆ ಭಾಷಾರೂಪದಲ್ಲಿ ಬದಲಾವಣೆಯಾಗಿದೆ. ಛಂದೋರೂಪದಲ್ಲಿ ಬದಲಾವಣೆಯಾಗಿದೆ. ರಾಜಕೀಯ–ಸಾಮಾಜಿಕ ಪರಿಸ್ಥಿತಿಗಳಲ್ಲಿ ಬದಲಾವಣೆಗೊಂಡಿದೆ. ಮತ–ಧರ್ಮಗಳಲ್ಲಿ ಜೈನ, ವೀರಶೈವ, ವೈಷ್ಣವ ಧರ್ಮಗಳಿಂದ ಪ್ರೇರಣೆಗೊಂಡು ರಚಿತವಾಗಿದೆ. ಈ ರೀತಿಯ ಬದಲಾವಣೆಗೆ ಅಂದಂದಿನ ಯುಗಧರ್ಮವೇ ಕಾರಣ. ಪರಂಪರೆಯ ತಳಹದಿಯ ಮೇಲೆಯೇ ಎಲ್ಲಾ ಹೊಸ ಪ್ರಯೋಗಗಳು ನಡೆಯುವುವು. ಆ ಪ್ರಯೋಗಗಳೇ ಪರಂಪರೆಯಾಗಿ ರೂಪಗೊಳ್ಳುವುದು ಎಂದು ಲೂಯಿಸ್ ಮ್ಯಾಕ್‌ನಿಸ್ ಹೇಳುತ್ತಾರೆ. ಅವರ ಈ ಮಾತು ಅರ್ಥಗರ್ಭಿತವಾಗಿದೆ. ಇಡೀ ಕನ್ನಡ ಸಾಹಿತ್ಯ ಪರಂಪರೆಯೇ ಪ್ರಾಚೀನ ಸಾಹಿತ್ಯದಿಂದ ಹಿಡಿದು ನವ್ಯೋತ್ತರ ಸಾಹಿತ್ಯದವರೆಗೂ ಈ ರೀತಿಯಾದ ಹೊಸ ಹೊಸ ಪ್ರಯೋಗಗಳಿಂದ ರೂಪಿತಗೊಂಡಿದೆ.

ಪಾಶ್ಚಾತ್ಯ ಮೀಮಾಂಸೆಯಲ್ಲಿ ಬಳಕೆಯಲ್ಲಿದ್ದ 'ಟ್ರೆಡಿಷನ್' (Tradition) ಎಂಬುದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ 'ಪರಂಪರೆ' ಎಂಬ ಪರಿಕಲ್ಪನೆಯನ್ನು ಬಳಸಲಾಗಿದೆ. ಕಲಾವಿದರಿಂದ ಮತ್ತು ಚಿಂತನಶೀಲ ವ್ಯಕ್ತಿಗಳಿಂದ ಒಂದು ಕಾಲದ ಪರಂಪರೆ ಹರಳುಗಟ್ಟುತ್ತದೆ. ಸಮಾಜದ ಸಂಪ್ರದಾಯ, ಕ್ರಿಯಾವಿಧಾನಗಳು, ಜನಾಂಗದ ವಿಕಾಸಕ್ಕೆ ಕಾರಣವಾಗಿ ಸತ್ವಪೂರ್ಣವಾದ

ಪರಂಪರೆಗೆ ಕಾರಣೀಭೂತವಾಗುತ್ತವೆ. ಒಂದು ನಾಡಿನ ಜೀವನ ಪ್ರವಾಹಕ್ಕೆ ಸಾತತ್ಯವನ್ನು, ವೇಗವನ್ನು ಮತ್ತು ಶಕ್ತಿಯನ್ನು ಪರಂಪರೆ ತಂದುಕೊಡುತ್ತಾ ಇಡೀ ಸಾಹಿತ್ಯದಲ್ಲಿ ಕಾವ್ಯ ಪರಂಪರೆಯಷ್ಟು ಹರವು ಮತ್ತೆ ಇನ್ನಾವ ಪ್ರಕಾರಕ್ಕೂ ಇಲ್ಲ. ಸಾಹಿತ್ಯ ವಿಮರ್ಶೆ ಒಂದು ನೂರು ವರ್ಷಗಳ ಹಿಂದಿನ ಧಾರೆಯಾಗಿದೆ. ವಿಮರ್ಶೆಯಲ್ಲಿ ಈ ಪರಂಪರೆ ಹೊಸತು ಸೈದ್ಧಾಂತಿಕ, ದೃಷ್ಟಿಕೋನಕ್ಕೆ ಹೊಳಹು ನೀಡುತ್ತದೆ.

ಇಂತಹ ವಿಮರ್ಶಾಲೋಕದಲ್ಲಿ ಪರಂಪರೆ ಎನ್ನುವುದು ಎರಡು ಸ್ತರಗಳಲ್ಲಿ ಅತ್ಯಂತ ಮುಖ್ಯ ಮತ್ತು ಗಮನಾರ್ಹವಾಗಿದೆ. ಮೊದಲನೆಯದಾಗಿ ವಿಮರ್ಶಕರಾದವರು ಈ ಹಿಂದಿನ ವಿಮರ್ಶಾ ದೃಷ್ಟಿಕೋನಕ್ಕೆ ಅವರಿಗಿರುವ ಮತ್ತು ನಮಗಿರುವ ಆಸಕ್ತಿ, ಶ್ರದ್ಧೆಗಳಿಂದ ಹೇಗೆ ಪ್ರತಿಕ್ರಿಯಿಸುತ್ತಾರೆ. ಎರಡನೆಯದಾಗಿ ತಮ್ಮದೊಂದು ಭಾಷೆಯಲ್ಲಿ ಹೊಸ ವಿಮರ್ಶಾ ವಿಧಾನಗಳನ್ನು ಹೇಗೆ ಸ್ಥಾಪಿಸುತ್ತಾರೆ, ಎಂಬುದರಿಂದ ಅವರು ನಿರ್ಮಿಸುವ ಪರಂಪರೆ ಸಿದ್ಧವಾಗುತ್ತದೆ. ಈ ಎರಡರಲ್ಲಿಯೂ ವಿಮರ್ಶಕರು ಮುಖ್ಯ ಸಾಧನೆಯನ್ನು ಮಾಡಿರಬೇಕು. ಅಂತಹ ಸಾಧನೆ ಮಾಡಿದವರಲ್ಲಿ ಜಿ.ಎಚ್.ನಾಯಕರು ಒಬ್ಬರು. "ಸಮಕಾಲೀನ ಸಾಹಿತ್ಯದ ದಿಕ್ಕುದೆಸೆಯನ್ನು ನಿರ್ಣಯಿಸುವುದರಲ್ಲಿ ಪಾಲುಗೊಳ್ಳುವ ಹಾಗೂ ಪರಂಪರಾಗತ ಸಾಹಿತ್ಯದ ಪುನರ್‌ಮೌಲ್ಯೀಕರಣದಲ್ಲಿ ತೊಡಗುವ– ಈ ಎರಡೂ ರೀತಿಯ ಹೊಣೆಗಾರಿಕೆಯನ್ನು ಒಪ್ಪಿಕೊಂಡ ವಿಮರ್ಶೆ ಇವರದಾಗಿದೆ[೨೪]" ಎಂದು ಸೂಚಿಸುವ ದಾಮೋದರ್‌ರಾವ್‌ರವರು ನಾಯಕರು ತಮ್ಮ ವಿಮರ್ಶೆಯಲ್ಲಿ ಪರಂಪರೆಯ ಪ್ರಜ್ಞೆಯಿಂದ ಸಾಹಿತ್ಯವನ್ನು ವಿಶ್ಲೇಷಿಸುತ್ತಾರೆ ಎಂಬುದನ್ನು ಹೇಳುತ್ತಾರೆ.

ನಾಯಕರ ಪುನರ್‌ಮೌಲ್ಯೀಕರಣ ವಿಮರ್ಶಾವಿಧಾನವೇ ಪರಂಪರೆಯನ್ನು ದೃಷ್ಟಿಯಲ್ಲಿಟ್ಟು ಕೊಂಡು ವಿವೇಚಿಸುವುದಾಗಿದೆ. "ಸಾಹಿತ್ಯ ಪರಂಪರೆ ಎಂದರೆ ಸಾಹಿತ್ಯ ಕೃತಿಗಳನ್ನು ಕಾಲಾನುಕ್ರಮದಲ್ಲಿ ಜೋಡಿಸುವ ನಿಶ್ಚಲ ವ್ಯವಸ್ಥೆಯಲ್ಲ. ಇಂದಿನ ಮತ್ತು ಹಿಂದಿನ ಎಲ್ಲಾ ಕೃತಿಗಳ ಬಗೆಗೆ ಏಕಕಾಲಕ್ಕೆ ತಮ್ಮ ಇರುವನ್ನು ಪಡೆಯುವಂಥ ಒಂದು ಆದರ್ಶ ವ್ಯವಸ್ಥೆ. ಅಂದರೆ ಈ ಪರಿಕಲ್ಪನೆಯಲ್ಲೂ ಭೂತಕಾಲದ ವರ್ತಮಾನತೆ ಮುಖ್ಯವಾಗುತ್ತದೆ. ಎಲಿಯಟ್‌ನ ಪರಿಕಲ್ಪನೆಯ ಅತ್ಯಂತ ವಿಶಿಷ್ಟ ಲಕ್ಷಣವೆಂದರೆ ಹೊಸಕೃತಿಯೊಂದರ ಪ್ರವೇಶದೊಂದಿಗೆ ಹಿಂದಿನ ಕೃತಿಗಳ ಆದರ್ಶ ವ್ಯವಸ್ಥೆಯಲ್ಲಿ ಬದಲಾವಣೆಯಾಗುವುದು ಅನಿವಾರ್ಯ[೨೫]" ಎಂದು ರಾಜೇಂದ್ರ ಚೆನ್ನಿ ಅವರು ಹೇಳುತ್ತಾರೆ. ಈ ಮಾತು ಜಿ.ಎಚ್.ನಾಯಕರಿಗೆ ನಿಜವಾಗಿಯು ಒಪ್ಪಿತವಾಗುತ್ತದೆ. ನಾಯಕರು 'ಪಂಪನ ಪದ್ಯವೊಂದರ ಪುನರ್‌ವಿಮರ್ಶೆ' ಎಂಬ ತಮ್ಮ ಲೇಖನದ ಸಂದರ್ಭದಲ್ಲಿ ಡಿ.ಎಲ್. ನರಸಿಂಹಾಚಾರ್ ರವರ 'ಪಂಪಭಾರತ ದೀಪಿಕೆ,' ಪೂರ್ಣಚಂದ್ರ ತೇಜಸ್ವಿಯವರ 'ಪಂಪ–ಒಂದು

ಮೌಲ್ಯ ವಿವೇಚನೆ,' ರಂ.ಶ್ರೀ.ಮುಗಳಿ ಯವರ 'ಪಂಪನದೇಸಿ,' ಸಿ.ಪಿ.ಕೆ ಅವರ 'ನಲ್ಮೆಯದಿಬ್ಬ,' (ಆಲೋಚನಾ ಕೃತಿಯ) ಲೇಖನವನ್ನೂ, ಎನ್.ಅನಂತರಂಗಾಚಾರ್‌ರ 'ಪಂಪ ಕವಿಯ ಪಂಪಭಾರತದ ಗದ್ಯಾನುವಾದ' ಇಪ್ಪತ್ತನೆಯ ಶತಮಾನದ ಈ ಕೃತಿಗಳನ್ನು ಮತ್ತು ಪಂಪನ 'ವಿಕ್ರಮಾರ್ಜುನ ವಿಜಯ' ಕಾವ್ಯವನ್ನು ಅನುಲಕ್ಷಿಸಿ ತಾರ್ತಿಕವಾಗಿ ಪುನರ್ ವಿಮರ್ಶಿಸುತ್ತಾರೆ. ನಾಯಕರಿಗೆ ಕನ್ನಡ ಪ್ರಾಚೀನ ಸಾಹಿತ್ಯ ಪರಂಪರೆಯ ಬಗೆಗೆ ಸೂಕ್ಷ್ಮ ಮತ್ತು ಆಳವಾದ ಜ್ಞಾನ ಇರುವಂತೆಯೇ ಆಧುನಿಕ ಸಾಹಿತ್ಯದ ಬಗೆಗೂ ವಿಶೇಷವಾದ ಆಸಕ್ತಿ ಇದೆ. ಪರಂಪರೆಯ ಆಳವಾದ ಜ್ಞಾನ ಹಾಗೂ ಆಧುನಿಕ ದೃಷ್ಟಿಕೋನದ ಅರಿವು ಅವರ ವಿಮರ್ಶಾ ಬರವಣಿಗೆಗೆ ತಾತ್ವಿಕವಾಗಿ ಸಮತೂಕವನ್ನು ತಂದುಕೊಟ್ಟಿದೆ.

ಪ್ರಾಚೀನ ಸಾಹಿತ್ಯ, ನವೋದಯ ಸಾಹಿತ್ಯ, ನವ್ಯ, ಪ್ರಗತಿಶೀಲ, ದಲಿತ ಮತ್ತು ಬಂಡಾಯ ಸಾಹಿತ್ಯ ಕೃತಿಗಳನ್ನು ಪರಂಪರೆಯೊಂದಿಗೆ ತೀಕ್ಷ್ಣವಾಗಿ ಪ್ರತಿಕ್ರಿಯಿಸುವಂತೆ ಇವರ ವಿಮರ್ಶಾ ಮಾದರಿ ಇದೆ. ಒಂದು ಸಾಹಿತ್ಯ ಪಂಥದ ಸಾಹಿತ್ಯಾತ್ಮಕ ಸೋಲು ಮತ್ತೊಂದು ಸಾಹಿತ್ಯ ಪಂಥದ ಸೃಜನಶೀಲತೆಗೆ ನಾಂದಿಯಾಗಿದೆ. ಒಂದು ಸಾಹಿತ್ಯ ಕೃತಿಯ ಮೇಲೆ ಬಂದ ವಿಮರ್ಶೆ ಮೇಲೆ ವಿಮರ್ಶೆ ಮಾಡುವಾಗ ಆ ಕೃತಿಯ ಪುನರ್ ಓದು ಹೊಸ ಅಭ್ಯಾಸವನ್ನು ಮಾಡುತ್ತದೆ. ಈ ತೀಕ್ಷ್ಣ ಸಂಘರ್ಷದಿಂದಾಗಿ ಮೌಲ್ಯನಿರ್ಣಯ ಬೇರೆಯಾಗಿಯೇ ಫಲಿಸುತ್ತದೆ. ನಾಯಕರು ಹುಟ್ಟು ಹಾಕಿದ್ದು ಈ ರೀತಿಯ ಸಹಜ ವಾಗ್ವಾದದ ಪರಂಪರೆ.

ಕುವೆಂಪು, ತೀ.ನಂ.ಶ್ರೀ. ಡಿ.ಎಲ್.ಎನ್, ರಂ.ಶ್ರೀ ಮುಗಳಿ, ಜಿ.ಎಸ್. ಶಿವರುದ್ರಪ್ಪ ಮೊದಲಾದವರು ಸಾಹಿತ್ಯ ಪರಂಪರೆಯೊಂದಿಗೆ ವಿವಿಧ ಸಂದರ್ಭದಲ್ಲಿ ಅನುಸಂಧಾನ ನಡೆಸಿದರು. ಈ ಹಿನ್ನೆಲೆಯಲ್ಲಿ ಪ್ರಾಚೀನ ಸಾಹಿತ್ಯವನ್ನು ಹೊಸದಾಗಿ ಓದುಗರಿಗೆ ಪರಿಚಯ ಮಾಡಿಕೊಡುವ, ವ್ಯಾಖ್ಯಾನಿಸುವ ಕಾರ್ಯ ಸಂದರ್ಭದಲ್ಲಿನ ವಿಮರ್ಶೆಯನ್ನು ನಾಯಕರು ಹೊಸದಾಗಿ ಗ್ರಹಿಸಿ ಪುನರ್‌ವ್ಯಾಖ್ಯಾನ ಮಾಡಿರುವುದು ಗಮನೀಯವಾದುದು. ಇವರ ವಿಮರ್ಶಾ ಲೇಖನಗಳಲ್ಲಿ ಈ ಮಾದರಿಯನ್ನು ಗಮನಿಸಬಹುದು. ಅವರ ವಿಮರ್ಶೆಯಲ್ಲಿ ಇದು ಬಹುಮುಖ್ಯ ಧೋರಣೆಯಾಗಿಯೇ ಬಂದಿದೆ. ಜಿ.ಎಚ್. ನಾಯಕರ 'ಸಮಕಾಲೀನ' ಸಂಕಲನ ಕುರಿತು "ಹೊಸ ಹೊಸ ವಿಚಾರಗಳನ್ನು, ಭಾವನೆಗಳನ್ನು, ಜ್ವಲಂತ ಅಂತದೃಷ್ಟಿಗಳನ್ನು ಸ್ಪಷ್ಟವಾಗಿ ನೇರವಾಗಿ ಅಸಂದಿಗ್ಧ ರೀತಿಯಲ್ಲಿ ವ್ಯಕ್ತಪಡಿಸುತ್ತ ನೂತನ ವಿಚಾರಧಾರೆಗಳನ್ನು ನಮ್ಮ ಸಂಪ್ರದಾಯಕ್ಕೆ ಹೊಂದಿಸುತ್ತ, ಪರಂಪರೆಗೆ ಹೊಸ ಆಯಾಮಗಳನ್ನು ನಿರ್ಮಿಸುತ್ತ ಬದುಕನ್ನು ನವೀಕರಿಸುವುದು ವಿಮರ್ಶೆಯ ಕೆಲಸ. ಸಾಂಸ್ಕೃತಿಕವಾಗಿ ಇದು ತುಂಬ ಮಹತ್ವವುಳ್ಳ ಕಾರ್ಯ........ ದಿವಂಗತರಾದ ತೀ.ನಂ.ಶ್ರೀಕಂಠಯ್ಯ, ಡಿ.ಎಲ್. ನರಸಿಂಹಾಚಾರ್ಯರಲ್ಲಿ ವ್ಯಕ್ತವಾಗುತ್ತಿದ್ದ ಪಾಂಡಿತ್ಯ, ಪ್ರತಿಭೆಗಳ

ಅಪೂರ್ವ ಸಂಯೋಗ ಈ ಲೇಖಕರಲ್ಲೂ ಕಂಡು ಬರುತ್ತಿರುವುದು ಕನ್ನಡದ ಭವಿಷ್ಯದ ಬಗ್ಗೆ ನಮಗೆ ಭರವಸೆ ಹುಟ್ಟಿಸುತ್ತದೆ. ಪರಂಪರೆಯನ್ನು ರೂಢಿಸಿಕೊಳ್ಳುವುದು ಅದರ ನಕಲುಗಳನ್ನು ತೆಗೆಯುತ್ತ ಹೋಗುವುದರಿಂದಲ್ಲ, ಅದಕ್ಕೆ ಹೊಸ ತಿರುವುನ್ನು ಆಯಾಮವನ್ನೂ ಕೊಡುವುದರಿಂದ[೨೬]" ಎಂದು ಅಡಿಗರು ಹೇಳುತ್ತಾರೆ. ಅವರ ಈ ಮಾತುಗಳು ಗಮನಾರ್ಹವಾಗಿವೆ. ಒಂದು ಕೃತಿ ಹಾಗೂ ಒಂದು ಸಾಹಿತ್ಯ ಪರಂಪರೆ ಭಿನ್ನ ಸಾಹಿತ್ಯ ತತ್ವಗಳ ವಿಮರ್ಶಾ ಮಾನದಂಡಗಳ ಸಂದರ್ಭದಲ್ಲಿ ಮೌಲ್ಯಮಾಪನಕ್ಕೆ ಮರಳಿ ಒಳಗಾದಾಗ ಆ ಕೃತಿಯಲ್ಲಿಯೆ ಸಾಹಿತ್ಯ ಪರಂಪರೆಯ ಹೊಸ ಚಹರೆಗಳು ಕಾಣಸಿಗುತ್ತವೆ. ನಾಯಕರು ಇದನ್ನು ಸಮಗ್ರವಾಗಿ ಅವಲೋಕಿಸಿ ತಮ್ಮದೇ ಒಂದು ವಿಮರ್ಶಾ ವಿಧಾನವನ್ನು ಕಟ್ಟಿಕೊಳ್ಳುತ್ತಾರೆ. ಆದ್ದರಿಂದಲೇ ಪುನರ್‌ಮೌಲ್ಯಮಾಪನವೇ ಒಂದು ಸಾಂಸ್ಕೃತಿಕ ಜವಾಬ್ದಾರಿಯಾಗಿ ಇವರ ವಿಮರ್ಶೆಯೊಳಗೆ ದಾಖಲಾಗುತ್ತಾ ಹೋಗುತ್ತದೆ.

ಆಧುನಿಕ ಕನ್ನಡ ವಿಮರ್ಶಾ ಪರಂಪರೆಯ ಹಾದಿಯಲ್ಲಿ ಯಾವುದೇ ಪ್ರಸಿದ್ಧ ಮತ್ತು ಚಿಂತನಶೀಲ ಲೇಖಕರು ಒಂದು ಸದೃಢವಾದ ಪರಂಪರೆಯಿಂದ ರೂಪುಗೊಳ್ಳುತ್ತಾರೆ. ಹಾಗೆಯೇ ಅವರು ಮುಂದಿನವರಿಗೆ ಪರಂಪರೆಯ ಭಾಗವಾಗಿ ನಿಂತುಕೊಳ್ಳುತ್ತಾರೆ. ಯಾವುದೇ ಪರಂಪರೆಯಿಲ್ಲದೆ ಶೂನ್ಯ ಸಂದರ್ಭದಲ್ಲಿ ವಿಮರ್ಶೆಯ ಚಟುವಟಿಕೆ ನಡೆಯುವುದಿಲ್ಲ. ಆದ್ದರಿಂದ ಪರಂಪರೆಯೊಂದನ್ನು ಸೀಳಿಕೊಂಡೇ ವಿಮರ್ಶೆ ಜರುಗುತ್ತದೆ. ನಾಯಕರು ಸಹ ಪರಂಪರೆ ಯೊಂದಿಗೆ ಅಂತರ್‌ಸಂಬಂಧ ಹೊಂದಿದುದಲ್ಲದೆ ವಿಮರ್ಶೆಯ ಪರಂಪರೆಯೊಂದನ್ನು ಹುಟ್ಟುಹಾಕುತ್ತಾರೆ. ಪುನರ್‌ವ್ಯಾಖ್ಯಾನ, ಪುನರ್‌ವಿಮರ್ಶೆಯು ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿನ ಅಗತ್ಯವನ್ನು ಮತ್ತೆ ಮತ್ತೆ ಜರುಗಲು ಇವರು ಬುನಾದಿ ಹಾಕುತ್ತಾರೆ. ಇದಕ್ಕೆ ಸಾಕ್ಷಿಯಾಗಿ ನಾಯಕರ ಉದಾ:- 'ಮತ್ತೆ ಮತ್ತೆ ಪಂಪ' ಕೃತಿಯನ್ನು ಗಮನಿಸಬಹುದು. "ಪರಂಪರೆಯನ್ನು ಸರಿಯಾಗಿ ತಿಳಿದುಕೊಂಡು ಅದರ ಪರಿಸರದಲ್ಲಿ ಕೆಲಸ ಮಾಡಿ ತಮ್ಮ ಸ್ವಂತದ ಅರ್ಥಪೂರ್ಣವಾದ ವೈಯಕ್ತಿಕ ಸಿದ್ದಿಗಳಿಂದ ಅದರ ಚೌಕಟ್ಟನ್ನು ಹಿಗ್ಗಿಸುವುದು, ಕಾಲಕ್ಕೆ ತಕ್ಕಂತೆ ಅದನ್ನು ಬದಲಿಸುವುದು ಇದಿಷ್ಟೇ ನಾವು ಮಾಡಬಹುದಾದ ಕೆಲಸ.[೨೭]" ಅಡಿಗರು ಹೇಳಿದ ಈ ಮಾತನ್ನು ನಾಯಕರು ತಮ್ಮ ವಿಮರ್ಶೆಯಲ್ಲಿ ಚೆನ್ನಾಗಿ ಪಾಲಿಸಿಕೊಂಡು ಬರುತ್ತಾರೆ. ಕಾವ್ಯ, ಕತೆ, ಕಾದಂಬರಿ, ನಾಟಕ, ಪ್ರಾಚೀನ ಸಾಹಿತ್ಯ ಹೀಗೆ ಯಾವ ಸಾಹಿತ್ಯ ಪ್ರಕಾರವನ್ನೇ ಆಗಲಿ, ವಿಮರ್ಶೆ ಮಾಡುವಾಗ ಪರಂಪರೆಯಲ್ಲಿಟ್ಟು ತೂಗಿನೋಡುತ್ತಾರೆ. ಹೀಗೆ ಅನೇಕ ಆಯಾಮಗಳೊಂದಿಗೆ ಅರಿತು ವಿಮರ್ಶಿಸುವುದು ನಾಯಕರ ಮುಖ್ಯಧೋರಣೆ. ನಾಯಕರೇ ಸ್ವತಃ "ಈ ಸಾಹಿತಿಗಳ ಸಾಹಿತ್ಯದಲ್ಲಿ ಕಾಣಬಹುದಾದ ಮಿತಿಗಳಿಗೆ ಕಾರಣಗಳನ್ನು ಮೂಲಭೂತವಾಗಿ ಅವರು ಒಪ್ಪಿಕೊಂಡಿರುವ ಸೈದ್ಧಾಂತಿಕ ಹಿನ್ನಲೆಗಿಂತ ಹೆಚ್ಚಾಗಿ

ಆಯಾ ಸಾಹಿತಿಯ ಸಂವೇದನಾಶೀಲತೆಯ ಮಿತಿ ಮತ್ತು ಸಾಮಾಜಿಕ ಅಥವಾ ಸಾಂಸ್ಕೃತಿಕ ಸಂದರ್ಭ ಹಾಗೂ ಪರಂಪರೆಗಳಲ್ಲಿ ಹುಡುಕಬೇಕಾಗುತ್ತದೆ ಎಂದು ನಾನು ತಿಳಿದಿದ್ದೇನೆ[೨೮]" ಎಂದು ಹೇಳುತ್ತಾರೆ. ಈ ಮೂಲಕ ಸಾಹಿತ್ಯ ಪರಂಪರೆಯೊಂದರ ಬಗೆಗೆ ವರ್ತಮಾನ ತಳೆಯಬೇಕಾದ ನಿಲುವನ್ನು ನಾಯಕರು ಸ್ಪಷ್ಟಪಡಿಸುತ್ತಾರೆ. ಅನಂತಮೂರ್ತಿ, ಗೋಪಾಲಕೃಷ್ಣ ಅಡಿಗ ಹಾಗೂ ಚಂದ್ರಶೇಖರ ಕಂಬಾರರ ಸಾಹಿತ್ಯಿಕ ಕೃತಿಗಳ ತಾತ್ವಿಕ ಧೋರಣೆಗಳು ಹೊಸ ಸಾಧ್ಯತೆಗಳನ್ನು ತೆರೆಯುತ್ತವೆ ಎಂಬುದನ್ನು ಗುರುತಿಸುವಾಗ ಮತ್ತು ವಚನ ಸಾಹಿತ್ಯ ಸ್ವೋಪಜ್ಞತೆಯುಳ್ಳದ್ದು ಎಂದು ನಿರ್ಣಯಿಸುವಾಗ ನಾಯಕರು ಪರಂಪರೆಯ ನೆಲೆಗಟ್ಟಿನಲ್ಲೇ ವಿಮರ್ಶಿಸುತ್ತಾರೆ.

"ಒಂದು ಪರಂಪರೆ ಪೂರ್ಣವಾದಾಗ ಇನ್ನೊಂದು ಹೊಳಹನ್ನು ಹಾಕದೆ ಉಕ್ತಿಗೆ ಸಮಗ್ರತೆಯೂ ಕಾಂತಿಯೂ ಬರುವುದು ಕಠಿಣ. ಅಂತೇ ಇಂದು ನವ್ಯ ಕಾವ್ಯದ ಅವಶ್ಯಕತೆಯೂ ಉಂಟಾಗಿದೆ; ಒಂದು ಪರಂಪರೆ ತನ್ನ ಸಿದ್ದಿಯನ್ನು ಮುಟ್ಟಿದಾಗ ಇನ್ನೊಂದು ಸಿದ್ಧತೆಯು ತನ್ನ ಸಿದ್ದಿಯ ದಾರಿಯನ್ನು ಹುಡುಕುತ್ತಿರುತ್ತದೆ.[೨೯]" ಎಂಬ ನಾಯಕರ ಮಾತನ್ನು ಗಮನಿಸಬೇಕು. ಪ್ರಾಚೀನ ಸಾಹಿತ್ಯದಲ್ಲಿ ಜೈನ ಸಾಹಿತ್ಯದ ಸತ್ವ ತೀರಿದಾಗ ವೀರಶೈವ, ವೀರಶೈವದ ನಂತರ ಬ್ರಾಹ್ಮಣ ಸಾಹಿತ್ಯ. ಹೀಗೆ ಪರಂಪರೆಯಲ್ಲಿ ನಾಮ ನಿರ್ದೇಶನ ಮಾಡಿದ ಹಾಗೆ ನವೋದಯ ಸತ್ವ ತೀರಿದಾಗ ಪ್ರಗತಿಶೀಲ, ನವ್ಯ, ದಲಿತ-ಬಂಡಾಯಗಳು ಉಗಮಗೊಂಡವು. ಭಾಷೆ, ವಸ್ತು, ಕಾವ್ಯದ ಸ್ವಾಯತ್ತತೆ, ಕೃತಿನಿಷ್ಠತೆ, ವಿಮರ್ಶೆಯ ವಿಧಾನ, ಕವಿಯ ಅನುಭವ, ಸೃಜನಶೀಲತೆ, ಬರಹಗಾರನ ಗ್ರಥನಕೌಶಲ (Craftmenship) ಎಲ್ಲವೂ ಪಾರಂಪರಿಕವಾಗಿ ಬದಲುಗೊಂಡು ಬಂದಿರುವುದನ್ನು ನಾಯಕರು, ಪರಂಪರೆಯ ದೃಷ್ಟಿಕೋನದ ಒಳಗಿನಿಂದಲೇ ಗ್ರಹಿಸಿ ಒಂದು ತಾತ್ವಿಕ ಸ್ವರೂಪವನ್ನು ಕೊಡಬಯಸುತ್ತಾರೆ.

ಒಟ್ಟಿನಲ್ಲಿ ನಾಯಕರಲ್ಲಿ ಸಾಹಿತ್ಯ, ಸಾಹಿತ್ಯವಿಮರ್ಶೆ, ಸಂಸ್ಕೃತಿ, ಪರಂಪರೆ ಪರಿಕಲ್ಪನೆಗಳು ಒಂದೇ ಸರಪಳಿಯ ಬೇರೆ ಬೇರೆ ಕೊಂಡಿಯಂತಿವೆ. ಆದರೂ ಅವನ್ನು ಪ್ರತ್ಯೇಕಗೊಳಿಸಿ ಅಭ್ಯಾಸಮಾಡುವುದು ಅಧ್ಯಯನದ ತುರ್ತಾಗಿದೆ. ಒಂದೊಂದೇ ಪರಿಲ್ಪನೆಗಳನ್ನು ಬೇರೆ ಬೇರೆಯಾಗಿ ಪ್ರತ್ಯೇಕಗೊಳಿಸಿ ಸಮಗ್ರತೆಯಿಂದ ಚರ್ಚಿಸುವುದು ಮುಖ್ಯವಾಗಿ ಕಂಡು ಬಂದದ್ದರಿಂದ ಈ ರೀತಿಯಾಗಿ ವರ್ಗೀಕರಣ ಮಾಡಿ ಇಲ್ಲಿ ಅಧ್ಯಯನ ಮಾಡಲಾಗಿದೆ.

**ಟಿಪ್ಪಣಿಗಳು:**

೧. ರಾಮಚಂದ್ರನ್ ಸಿ.ಎನ್, 'ಸಾಹಿತ್ಯ ವಿಮರ್ಶೆ', ಪುಟ-೧೪೦

೨. ಅದೇ, ಪುಟ-೧೪೧

೩. ನಾಗರಾಜ.ಡಿ.ಆರ್, 'ಸಂಸ್ಕೃತಿ ಕಥನ', ಪುಟ-೯೮

೪. ನಾಯಕ ಜಿ.ಎಚ್, 'ಸ್ಥಿತಿಪ್ರಜ್ಞೆ', ಪುಟ–೮೩

೫. ನಾಯಕರನ್ನು ಕುರಿತು ಪ್ರೊ.ರಹಮತ್ ತರೀಕೆರೆ ಅವರ ಸಂದರ್ಶನದಲ್ಲಿ ಕನ್ನಡದ ಎಫ್.ಆರ್. ಲೀವೀಸ್ ಎಂದು ನಾಯಕರ ಬಗ್ಗೆ ಪ್ರಶ್ನೆ ಎತ್ತುತ್ತಾರೆ. ಇದರ ಮಾಹಿತಿ 'ಸ್ಥಿತಿ ಪ್ರಜ್ಞೆ' ಕೃತಿಯಲ್ಲಿ ದೊರೆಯುತ್ತದೆ. ಹಾಗೆಯೇ ಬಿ.ದಾಮೋದರ್ ರಾವ್ ಅವರು ಲೀವೀಸ್ ಧೋರಣೆಗಳು ನಾಯಕರಲ್ಲಿ ಇವೆ ಎಂದು ತಮ್ಮ 'ಆಯಾಮಗಳು' ಕೃತಿಯಲ್ಲಿ ಹೇಳುತ್ತಾರೆ. ಆದರೆ ಯು.ಆರ್.ಅನಂತಮೂರ್ತಿ ಹಾಗೂ ಡಿ.ಆರ್. ನಾಗರಾಜ ಅವರು ಎಂ.ಜಿ.ಕೆ. ಅವರನ್ನು ಕುರಿತು ಕನ್ನಡದ ಎಫ್.ಆರ್.ಲೀವೀಸ್ ಎಂದೂ ಕೂಡ ಕರೆಯುತ್ತಾರೆ.

೬. ಕೃಷ್ಣಮೂರ್ತಿ ಎಂ.ಜಿ, 'ಕೃತಿ ಸಂಸ್ಕೃತಿ', ಪುಟ– VII

೭. ನಾಯಕ ಜಿ.ಎಚ್, 'ಸ್ಥಿತಿಪ್ರಜ್ಞೆ', ಪುಟ–೮೨

೮. ಗಿರಡ್ಡಿ ಗೋವಿಂದರಾಜ, 'ಓದುವ ದಾರಿಗಳು', ಪುಟ– XII

೯. ಕೃಷ್ಣಮೂರ್ತಿ ಎಂ.ಜಿ, 'ಕೃತಿ ಸಂಸ್ಕೃತಿ', ಪುಟ– VII

೧೦. ದಾಮೋದರರಾವ್ ಬಿ, 'ಆಯಾಮಗಳು', ಪುಟ–೭೮

೧೧. ಅದೇ, ಪುಟ–೭೪

೧೨. ಕೃಷ್ಣಮೂರ್ತಿ ಎಂ.ಜಿ, 'ಕೃತಿ ಸಂಸ್ಕೃತಿ', ಪುಟ– VII

೧೩. ನಾಯಕ ಜಿ.ಎಚ್, 'ನಿರಪೇಕ್ಷ', ಪುಟ–೯–೧೦

೧೪. ನಾಯಕ ಜಿ.ಎಚ್, 'ನಿಜದನಿ', ಪುಟ–೨೪೨

೧೫. ನಾಯಕ ಜಿ.ಎಚ್, 'ಅನಿವಾರ್ಯ', ಪುಟ–೨೦

೧೬. ಅದೇ, ಪುಟ–೧೫

೧೭. ರಾಮಚಂದ್ರನ್ ಸಿ.ಎನ್, 'ಸಾಹಿತ್ಯ ವಿಮರ್ಶೆ', ಪುಟ–೭

೧೮. ಬರಗೂರು ರಾಮಚಂದ್ರಪ್ಪ, 'ವಿಮರ್ಶೆಯ ಸ್ವರೂಪ,' ಅರವಿಂದ ಮಾಲಗತ್ತಿ (ಸಂ), 'ಕನ್ನಡ ವಿಮರ್ಶೆಯ ಮಾರ್ಗ,' ಪುಟ–೧೧೬

೧೯. ಗೌರೀಶ ಕಾಯ್ಕಿಣಿ, 'ವಿಮರ್ಶೆಯಲ್ಲಿ ನವ್ಯತೆ', ವಿಷ್ಣುನಾಯ್ಕ (ಸಂ), 'ಸಾಹಿತ್ಯದಲ್ಲಿ ನವ್ಯತೆ', ಪುಟ–೨೭

೨೦. ನಾಗರಾಜ.ಡಿ.ಆರ್, 'ಶಕ್ತಿ ಶಾರದೆಯ ಮೇಳ', ಪುಟ–೧೭

೨೧. ಮಣಿಪಾಲ ಆರ್ಕೆ, 'ವಿಮರ್ಶೆಯ ಸವಾಲು', ಪುಟ–೯೫

೨೨. ನಾಯಕ ಜಿ.ಎಚ್, 'ಅನಿವಾರ್ಯ', ಪುಟ–೭

೨೩. ಅಶೋಕ.ಟಿ.ಪಿ, 'ಪುಸ್ತಕಪ್ರೀತಿ', ಪುಟ–೨೯೫

೨೪. ದಾಮೋದರ್‌ರಾವ್ ಬಿ, 'ಆಯಾಮಗಳು', ಪುಟ–೮೦

೨೫. ರಾಜೇಂದ್ರ ಚೆನ್ನಿ,'ಅಮೂರ್ತತೆ ಮತ್ತು ಪರಿಸರ', ಪುಟ–೮೫

೨೬. ಗೋಪಾಲಕೃಷ್ಣ ಅಡಿಗ, 'ಮುನ್ನುಡಿ' ಜಿ.ಎಚ್. ನಾಯಕ 'ಸಮಕಾಲೀನ', ಪುಟ– V, VI

೨೭. ನಾಯಕ ಜಿ.ಎಚ್, 'ಅನಿವಾರ್ಯ', ಪುಟ–೨೩

೨೮. ಅದೇ, ಪುಟ–೧೧

೨೯. ಅದೇ, ಪುಟ–೨೯

ಅಧ್ಯಾಯ: ೩.

# ಜಿ.ಎಚ್. ನಾಯಕರ ವಿಮರ್ಶೆ: ವಿಭಿನ್ನ ವಿಮರ್ಶಾ ವಿಧಾನಗಳು

೩.೧. ಕೃತಿನಿಷ್ಠ ವಿಮರ್ಶೆ
೩.೨. ಚಾರಿತ್ರಿಕ ವಿಮರ್ಶೆ
೩.೩. ಸಂಸ್ಕೃತಿ ನಿಷ್ಠ ವಿಮರ್ಶೆ

ವಿಮರ್ಶಕನೊಬ್ಬನು ಕೃತಿಯೊಂದರ ಮೇಲೆ ಮೌಲ್ಯನಿರ್ಣಯವನ್ನು ಕೈಗೊಳ್ಳುವಾಗ ಏಕಮುಖವಾದ ಮತ್ತು ಇದೇ ಅಂತಿಮ ನಿರ್ಣಯವೆಂದು ಗೆರೆಕೊರೆದು ಹೇಳಲು ಸಾಧ್ಯವಿಲ್ಲ. ವಿಮರ್ಶೆ ಸಾಮೂಹಿಕ ಶೋಧವಾಗಿರುವುದರಿಂದ ವಿಮರ್ಶಕರಲ್ಲಿ ವಿಚಾರಗಳು, ತೀರ್ಮಾನಗಳು, ಅನುಭವದ ಮಾತುಗಳು, ಮಾನದಂಡಗಳು, ಸಮನಾದ ನಿರ್ಧಾರಗಳು ಏರ್ಪಡದೆ ಭಿನ್ನ ಭಿನ್ನವಾದ ನಿಲುವುಗಳು ಕಾಲ ಸಂದರ್ಭದಲ್ಲಿ ಉಗಮಗೊಳ್ಳುತ್ತವೆ. ಹೀಗೇಕೆ ಎಂದು ಆಲೋಚಿಸಿದಾಗ ಅದಕ್ಕೆ ಉತ್ತರ ದೊರೆಯುವುದು ಇಷ್ಟೆ. ಯಾವುದೇ ವಿಮರ್ಶೆ ವೈಜ್ಞಾನಿಕದತ್ತಾಂಶ ಆಗಿರುವುದಿಲ್ಲ. ಹಾಗಾಗಿಯೇ ಕರ್ತೃನಿಷ್ಠ ವಿಮರ್ಶೆ, ಸಮಾಜ ಕೇಂದ್ರಿತ ವಿಮರ್ಶೆ, ಕೃತಿನಿಷ್ಠ ವಿಮರ್ಶೆ ಮತ್ತು ವಾಚಕ ಕೇಂದ್ರಿತ ವಿಮರ್ಶೆ ಎಂಬ ವಿಮರ್ಶಾ ಪ್ರಸ್ಥಾನಗಳು ಉಗಮಗೊಂಡದ್ದು. ಈ ಪ್ರಸ್ಥಾನಗಳ ಆಂತರ್ಯದಲ್ಲಿ ಮತ್ತೆ ಅನೇಕ ಬಗೆಯ ವಿಮರ್ಶಾವಿಧಾನ ಮತ್ತು ದೃಷ್ಟಿಕೋನಗಳು ರೂಪುತಾಳಿದವು.

ಸಾಹಿತ್ಯ ವಿಮರ್ಶಾ ಪ್ರಕ್ರಿಯೆಯಲ್ಲಿ ಕೃತಿ ಬಗೆಗಿನ ಹಳೆಯ ನಿಲುವುಗಳನ್ನು ವಿರೋಧಿಸುವ, ನಿರಾಕರಿಸುವ ಕ್ರಿಯೆ ನಡೆಯುತ್ತಲೇ ಇರುತ್ತದೆ. ಹಾಗೆಯೇ ಹೊಸದನ್ನು ಪ್ರತಿಪಾದಿಸುವ, ಪರಿಷ್ಕರಿಸುವ, ಸ್ವೀಕರಿಸುವ ಮತ್ತು ಪ್ರತಿಷ್ಠಾಪಿಸುವ ಕ್ರಿಯೆಯ ಮೂಲಕ ಕೃತಿ ಮತ್ತೊಮ್ಮೆ ಹೊಸ ವಿಮರ್ಶಾ ನೆಲೆಗಳನ್ನು ರೂಪಿಸುತ್ತದೆ. ಜೀವವನ್ನು ಪಡೆಯುತ್ತದೆ ಮತ್ತೆ ಜಡಗೊಳ್ಳುತ್ತ ಮತ್ತೊಂದು ವಿಮರ್ಶೆಯ ನಿಲುವಿಗೆ ಜನ್ಮ ನೀಡುತ್ತದೆ. ಹೀಗೆ ಇದು ಸೂತ್ರಬದ್ಧ ವ್ಯವಸ್ಥೆಯಂತೆ ಕಾಲಕಾಲಕ್ಕೆ ಬದಲುಗೊಂಡು ಗೋಚರವಾಗುತ್ತದೆ. ಈ ಪ್ರಕ್ರಿಯೆಯಲ್ಲಿಯೇ ವಿಮರ್ಶೆಯ ಹೊಸ ಮಾನದಂಡಗಳು ರೂಪುಗೊಳ್ಳುತ್ತವೆ. ಈ ಕಾರಣದಿಂದಾಗಿಯೇ ಒಂದು ತಾತ್ವಿಕತೆಯ ಗ್ರಹಿಕೆ ಬದಲಾದಂತೆ ವಿಮರ್ಶೆಯ ನೆಲೆಗಳು ಬದಲಾಗುತ್ತವೆ. ನವೋದಯ, ಪ್ರಗತಿಶೀಲ, ನವ್ಯ, ನವ್ಯೋತ್ತರ ಸಂದರ್ಭದಲ್ಲಿ ಇಂತಹ ಬದಲಾವಣೆಯನ್ನು ಗ್ರಹಿಸಬಹುದು.

೧೯೬೦ ರಲ್ಲಿ ಬಂದಂತಹ ಕನ್ನಡ ನವ್ಯ ಸಾಹಿತ್ಯ ವಿಮರ್ಶೆಯ ಸ್ವರೂಪ ಬದಲುಗೊಂಡು ಬಂದದ್ದು ಸಾಹಿತ್ಯ ವಿಮರ್ಶೆಯಲ್ಲಿ ಒಂದು ಹೊಸಯುಗ ಪ್ರಾರಂಭವಾದದ್ದರ ಫಲವಾಗಿ ವಿಮರ್ಶೆಯಲ್ಲಿ ತಾಂತ್ರಿಕ ಪದಗಳು ಚಲಾವಣೆಗೆ ಬಂದವು. ಇದಕ್ಕೆಲ್ಲ ಇಂಗ್ಲಿಷ್‌ನಲ್ಲಿನ 'ನ್ಯೂ ಕ್ರಿಟಿಸಿಸಂ' ಕಾರಣವಾಯಿತು. ಇದನ್ನು ಓದಿಕೊಂಡ ಪ್ರಾಧ್ಯಾಪಕರು ಶೈಕ್ಷಣಿಕ ಅಭ್ಯಾಸವಾಗಿ ತರಗತಿಯಲ್ಲಿ ಬೋಧಿಸುವಾಗ ನವ್ಯ ವಿಮರ್ಶೆಯಾಗಿ ಕನ್ನಡಕ್ಕೆ ಅನ್ವಯಿಸಿಕೊಂಡರು. ವಿಶ್ವವಿದ್ಯಾಲಯಗಳ ಕನ್ನಡ ಮತ್ತು ಇಂಗ್ಲಿಷ್ ಪ್ರಾಧ್ಯಾಪಕರ ದೃಷ್ಟಿ ಧೋರಣೆಗಳಿಂದ ಹೊಸ ವಿಮರ್ಶಾ ಮಾರ್ಗವು ಚಲನಶೀಲತೆ ಕಂಡಿತು. ಕೆ.ಡಿ.ಕುರ್ತಕೋಟಿ, ಯು.ಆರ್.ಅನಂತಮೂರ್ತಿ, ಎಂ.ಜಿ. ಕೃಷ್ಣಮೂರ್ತಿ, ಶಾಂತಿನಾಥ ದೇಸಾಯಿ, ಪಿ. ಲಂಕೇಶ್, ಜಿ.ಎಸ್.ಆಮೂರ, ಎಲ್.ಎಸ್.

ಶೇಷಗಿರಿರಾವ್, ಗಿರಡ್ಡಿ ಗೋವಿಂದರಾಜ, ದಾಮೋದರರಾವ್, ಜಿ.ಎಚ್. ನಾಯಕ ಮೊದಲಾದವರ ವಿಮರ್ಶೆಯನ್ನು ನವ್ಯ ವಿಮರ್ಶೆ ಎಂದು ಗುರುತಿಸಬಹುದು. ಇವರಲ್ಲಿ ಜಿ.ಎಚ್. ನಾಯಕರು ಸಹ ವಿಮರ್ಶಾ ವಿಧಾನ ಮತ್ತು ದೃಷ್ಟಿಕೋನಗಳಲ್ಲಿ ತಮ್ಮದೇ ಆದ ತಾತ್ವಿಕ ನೆಲೆಗಳ ಮೂಲಕ ವಿಮರ್ಶಿಸುತ್ತಾರೆ. ಕನ್ನಡ ಸಾಹಿತ್ಯ ಪರಂಪರೆಯ ಅವಲೋಕನ ಕ್ರಮವೇ ಇವರ ವಿಮರ್ಶೆಯ ನೆಲೆಗಳನ್ನು ಕೇಂದ್ರೀಕರಿಸುತ್ತದೆ.

ಜಿ.ಎಚ್. ನಾಯಕರು ಕನ್ನಡ ನವ್ಯ ವಿಮರ್ಶಕರಲ್ಲಿನ ಪ್ರಖ್ಯಾತ ವಿಮರ್ಶಕರ ಸಾಲಿಗೆ ಸೇರುತ್ತಾರೆ. ಆದರೆ ಇತರ ಕೆಲ ನವ್ಯ ವಿಮರ್ಶಕರಂತೆ ಜಿ.ಎಚ್.ನಾಯಕರ ವಿಮರ್ಶಾ ವ್ಯಕ್ತಿತ್ವ ರೂಪಗೊಂಡಿದ್ದು ಏಕಮುಖವಾದ ರೂಪದಿಂದ ಅಲ್ಲ: ಬಹುಮುಖಿಯಾದ ಜೀವನಾನುಭವಗಳ ಆಸಕ್ತಿಗಳ ಪ್ರೇರಣೆ, ಪ್ರೋತ್ಸಾಹ, ಕಾಳಜಿ–ಕಳಕಳಿಗಳಿಂದ. ಕನ್ನಡ ಪ್ರಾಧ್ಯಾಪಕರಾಗಿ ಪಾಶ್ಚಾತ್ಯ ವಿಮರ್ಶಾ ಮಾದರಿಗಳನ್ನು ಅನುಸರಿಸಿದ್ದು ಅವರ ಒಂದು ವಿಶಿಷ್ಟತೆಯೇ ಸರಿ. ಆದರೆ ಅವರ ವಿಮರ್ಶೆಯ ಸ್ವರೂಪ ಕನ್ನಡ ನವ್ಯ ವಿಮರ್ಶೆಯದ್ದೇ ಆಗಿದೆ. ಬೋಧನೆಯ ಜೊತೆಗೆ ಕನ್ನಡ ಸಾಹಿತ್ಯದ ಬಗೆಗೆ ಲೇಖನಗಳನ್ನು, ಭಾಷಣಗಳನ್ನು ಪ್ರಸ್ತುತ ಪಡಿಸಿದ್ದು ಇವರ ವಿಮರ್ಶೆಯ ಹೆಗ್ಗುರುತಾಗಿವೆ. ಕೃತಿನಿಷ್ಠ ವಿಮರ್ಶೆ, ಚಾರಿತ್ರಿಕ ವಿಮರ್ಶೆ, ಸಂಸ್ಕೃತಿನಿಷ್ಠ ವಿಮರ್ಶೆ ಎಂಬ ಭಿನ್ನ ವಿಮರ್ಶಾ ವಿಧಾನಗಳಲ್ಲಿ ತಮ್ಮ ವಿಮರ್ಶೆಯ ನಿಲುವುಗಳನ್ನು ಅವರು ವ್ಯಕ್ತಪಡಿಸಿದ್ದಾರೆ. ಕೃತಿಯೊಂದರ ತಂತ್ರದ ಪರೀಕ್ಷೆ, ಕೃತಿಯಲ್ಲಿನ ರಚನಾ ವಿಧಾನ, ಶಿಲ್ಪ, ಪ್ರತಿಮೆ, ಸಂಕೇತ, ಭಾಷೆ, ವಸ್ತು ಮುಂತಾದ ನವ್ಯದ ವಿಮರ್ಶಾಧಾರೆಯನ್ನು ಇಟ್ಟುಕೊಂಡು ನಾಯಕರು ತಮ್ಮ ವಿಮರ್ಶೆಯ ತಾತ್ವಿಕ ಚೌಕಟ್ಟನ್ನು ರೂಪಿಸಿಕೊಳ್ಳುತ್ತಾರೆ. ಕೃತಿಯ ಮೌಲ್ಯಮಾಪನ ಮತ್ತು ಪುನರ್ ಮೌಲ್ಯಮಾಪನ ವಿಧಾನ ಇವರ ವಿಮರ್ಶೆಯ ಧ್ಯೇಯವಾಗಿಯೇ ಕೆಲಸ ಮಾಡಿರುವುದು ಗಮನೀಯ.

## ೩.೧. ಕೃತಿನಿಷ್ಠ ವಿಮರ್ಶೆ

ಕೃತಿನಿಷ್ಠ ವಿಮರ್ಶೆಯು ಕರ್ತೃನಿಷ್ಠ ವಿಮರ್ಶೆಗೆ ಪ್ರತಿಕ್ರಿಯೆಯಾಗಿ ಬಂದಿದೆ. ಕೃತಿ ಅಥವಾ ಪಠ್ಯವು ಒಂದು ರಚನೆಯಾಗಿರುವುದರಿಂದ ಅರ್ಥವನ್ನು ಆರಚನೆಯೊಳಗೆ ಹುಡುಕುವುದು, ಸಾಹಿತ್ಯದ ತಂತ್ರಗಳ ಮೂಲಕ ಕೃತಿಕಾರನು ಅಭಿವ್ಯಕ್ತಿಯನ್ನು ಮಾಡಿರುವುದರಿಂದ ಓದುಗರು ಸೂಕ್ಷ್ಮವಾಗಿ ಭಾಷಿಕ ಮತ್ತು ಸಾಹಿತ್ಯಿಕ ಸಂಬಂಧಗಳನ್ನು ಗಮನಿಸಿ ಅರ್ಥವನ್ನು ಪಡೆಯುವಂತೆ ಅನುಸಂಧಾನ ಮಾಡುವುದು ಕೃತಿನಿಷ್ಠ ವಿಮರ್ಶೆ. ಹೀಗೆ ಕೃತಿಯಲ್ಲಿ ಕಾಣಬರುವ ಸಂಬಂಧ ಮತ್ತು ವೈದೃಶ್ಯಗಳನ್ನು, ತಂತ್ರ ಮತ್ತು ಕೌಶಲ್ಯಗಳನ್ನು, ಅರ್ಥ ಮತ್ತು ಮಹತ್ವಗಳನ್ನು ಗುರುತಿಸಿ ಕೃತಿಯ ಮೌಲ್ಯ ಮತ್ತು ಯೋಗ್ಯತೆಯನ್ನು ನಿರ್ಧರಿಸಲಾಗುತ್ತದೆ. ಕೃತಿಯ ಬಂಧಕ್ಕೆ ಈ ಓದು

ಅಥವಾ ವಿಮರ್ಶೆ ಮಹತ್ವ ಕೊಡುವುದರಿಂದ ಇದನ್ನು ರೂಪನಿಷ್ಠ ವಿಮರ್ಶೆ ಎಂದು ಕೂಡ ಕರೆಯುತ್ತಾರೆ. ಈ ರೀತಿಯಾದ ರೂಪನಿಷ್ಠ ವಿಮರ್ಶೆಯ ನೆಲೆಗಳನ್ನು ಜಿ.ಎಚ್. ನಾಯಕರ ವಿಮರ್ಶೆಯಲ್ಲಿ ಗುರುತಿಸಬಹುದು.

ಕೃತಿನಿಷ್ಠ ವಿಮರ್ಶೆ ಮತ್ತು ವಿಮರ್ಶಕರನ್ನು ಕುರಿತು ಅಡಿಗರು ಹೀಗೆ ಹೇಳುತ್ತಾರೆ: "ವಿಮರ್ಶನದ ಮೊದಲನೆಯ ಕೆಲಸ ಕೃತಿಯ ಆಮೂಲಾಗ್ರವಾದ ಅಭ್ಯಾಸ: ಆ ಅಭ್ಯಾಸಕ್ಕೆ ತಕ್ಕ ಊಹಾಶಕ್ತಿ, ಭಾಷಾಜ್ಞಾನ, ವಿನಯ, ಮತ್ತು ತಾಳ್ಮೆ ಅತ್ಯಗತ್ಯ... 'ಕೃತಿ' ಒಂದು ಸ್ವತಂತ್ರ ವಸ್ತು." ಕನ್ನಡದಲ್ಲಿ ಉತ್ತಮ ವಿಮರ್ಶೆ ಬರುತ್ತಿಲ್ಲ ನಿಜವಾಗಿ ವಿಮರ್ಶಾ ಸಾಹಿತ್ಯ ಸರಿಯಾಗಿ ಬೆಳೆಯಲೇ ಇಲ್ಲ... ಇದಕ್ಕೆ ಮುಖ್ಯ ಕಾರಣ ನಮ್ಮಲ್ಲಿ ಉತ್ತಮ ಸಾಹಿತ್ಯ ವಿಮರ್ಶೆಗೆ ಸಮರ್ಥರಾದವರು ಇಲ್ಲ ಎಂಬುದಲ್ಲ, ಅರ್ಥವಿಮರ್ಶೆಗೆ ಬೇಕಾದ ನೈತಿಕ ಧೈರ್ಯ ತಕ್ಕಷ್ಟು ಬೆಳೆಯಲಿಲ್ಲ ಎಂಬುದೇ ಆಗಿದೆ. ಈವರೆಗಿನ ನಮ್ಮ ವಿಮರ್ಶೆ ಸ್ನೇಹಿತರ ಬಗ್ಗೆ ದಾಕ್ಷಿಣ್ಯ, ದೊಡ್ಡವರ ಬಗ್ಗೆ ಭಯ ಮೂರನೆಯವರ ಬಗ್ಗೆ ಔದಾಸೀನ್ಯ ಅಥವಾ ನಿಷ್ಕಾರಣ ವಿರೋಧ– ಇವುಗಳಿಂದ ಸಾಮಾನ್ಯವಾಗಿ ಮಲಿನವಾಗಿದೆ ಎಂದರೆ ವಿಮರ್ಶಕನ ಕಾರ್ಯ ವ್ಯಕ್ತಿನಿಷ್ಠವಾಗಿತ್ತೇ ಹೊರತು ಕೃತಿನಿಷ್ಠ ವಾಚನ ವಿಮರ್ಶೆಗಳಿಲ್ಲದೆ ಬುದ್ಧಿ ಜೀವನ ವಿಕಾಸವಾಗುವುದಿಲ್ಲ, ಹೃದಯಗಳು ಶುದ್ಧವಾಗಿರುವುದಿಲ್ಲ: ಬದಲಾಗಿ ಬುದ್ಧಿ ದಾರಿದ್ರ್ಯ, ಹೃದಯಕಾರ್ಪಣ್ಯ– ಇವು ಹಬ್ಬುತ್ತವೆ.[೧]" ಎಂಬ ಈ ನಿಲುವು ಕೃತಿನಿಷ್ಠ ವಿಮರ್ಶೆಯ ಪ್ರಾಮುಖ್ಯತೆ ಸೂಚಿಸುತ್ತದೆ. ನಾಯಕರ ವಿಮರ್ಶೆಯಲ್ಲಿ ಅಡಿಗರು ಹೇಳುವ ವಿಮರ್ಶೆಯ ಆಯಾಮಗಳನ್ನೆಲ್ಲ ಗುರುತಿಸ ಬಹುದು. ಆಮೂಲಾಗ್ರವಾದ ಅಭ್ಯಾಸ, ಭಾಷಾಜ್ಞಾನ, ವಿನಯ, ನೈತಿಕ ಧೈರ್ಯ ಮುಂತಾದ ಅಂಶಗಳು ಕನ್ನಡ ಸಾಹಿತ್ಯ ಪರಂಪರೆಯ ಅವಲೋಕನ ಸಂದರ್ಭದಲ್ಲಿ ಗುರುತಿಸಬಹುದು. ಹಾಗೆಯೇ ಟಿ.ಪಿ.ಅಶೋಕ ಅವರು "ಕೃತಿಯ ಒಳ ವಿವರಗಳ ಪರಿಶೀಲನೆ, ಪುನರ್ ಪರಿಶೀಲನೆ ಯೇ ಆತನ ಮೊಟ್ಟ ಮೊದಲ ವಿಧಾನವಾಗಬೇಕು ಕೃತಿಯೊಂದು ಸೃಷ್ಟಿಯಾದ ಸಂದರ್ಭ ಕೃತಿಕಾರನ ವೈಯುಕ್ತಿಕ ಮಾಹಿತಿ ಇತರ ವಿಮರ್ಶಕರ ಅಭಿಪ್ರಾಯ– ಇವುಗಳನ್ನು ಪೂರಕವಾಗಿ ಬೇಕಾದರೆ ಉಪಯೋಗಿಸಿಕೊಳ್ಳುವುದು. ಆದರೆ ನಮ್ಮ ಮುಂದೆ ಇರುವ ಕೃತಿ ಏನು ಹೇಳುತ್ತದೆ ಎಂಬುದನ್ನೆ ಪ್ರಧಾನವಾಗಿ ಗಣನೆಗೆ ತೆಗೆದುಕೊಳ್ಳಬೇಕು. ಒಬ್ಬ ಕಲಾವಿದ ಏನನ್ನು ತೋರಿಸಿದ್ದಾನೆ? ಏಕೆ ತೋರಿಸಿದ್ದಾನೆ? ಹೇಗೆ ತೋರಿಸಿದ್ದಾನೆ? ಯಾವ ಸಂದರ್ಭದಲ್ಲಿ ತೋರಿಸುತ್ತಿದ್ದಾನೆ? ಈ ಮೂಲಭೂತ ಪ್ರಶ್ನೆಗಳನ್ನು ಅವುಗಳ ಬೇರ್ಪಡಿಸಲಾಗದ ಸಾವಯವ ಸಂಬಂಧಗಳಲ್ಲಿ ಮಾತ್ರ ಕೇಳುವವನು ಜವಾಬ್ದಾರಿಯುತ ವಿಮರ್ಶಕನಾಗಿರುತ್ತಾನೆ.[೨]" ಎಂದು ಹೇಳುತ್ತಾರೆ. ಈ ಮಾತು ಕೂಡ ಕೃತಿನಿಷ್ಠ ವಿಮರ್ಶಕರ ಜವಾಬ್ದಾರಿತನವನ್ನೇ ಹೇಳುತ್ತದೆ.

ಅಡಿಗರು ಗ್ರಹಿಸಿದ ವಿಮರ್ಶೆಯ ಕಾಳಜಿ ಮತ್ತು ಅಶೋಕ ಅವರು ಗುರುತಿಸುವ ವಿಮರ್ಶಕನ ಜವಾಬ್ದಾರಿ ಎರಡೂ ಜಿ.ಎಚ್. ನಾಯಕರ ವಿಮರ್ಶೆಯಲ್ಲಿ ಮಿಳಿತವಾಗಿವೆ ಎಂಬುದನ್ನು ನಿಸ್ಸಂದೇಹವಾಗಿ ಗುರುತಿಸಬಹುದು. ನಿಷ್ಠುರ ನಿರ್ಣಯದ ಸ್ಪಷ್ಟ ನಿಲುವುಗಳನ್ನು ನಾಯಕರು ತಮ್ಮ ವಿಮರ್ಶೆಯಲ್ಲಿ ತಾಳುತ್ತಾರೆ. ವಿಮರ್ಶೆಯ ಸನ್ನಿವೇಶದಲ್ಲಿ ಕೃತಿವಿಮರ್ಶೆಯ ಬಗೆಗೆ ವಿನಯವಿರುತ್ತದೆಯೇ ಹೊರತು ಕೃತಿಕಾರನ ಬಗೆಗಲ್ಲ. ಪೋಲಂಕಿ ರಾಮಮೂರ್ತಿ ಯವರ ಬಗೆಗೆ ನಾಯಕರ ನಿಲುವು ಯಾವ ರೀತಿಯದ್ದು ಎಂಬುದಕ್ಕೆ 'ರನ್ನನ ಪದ್ಯವೊಂದರ ಪುನರ್‌ವಿಮರ್ಶೆ' (ನಿರಪೇಕ್ಷ), ಮತ್ತು 'ಆ ನೀರೊಳಗಿರ್ದುಂ ಬೆಮರ್ತನ್' (ನಿಜದನಿ) ಲೇಖನಗಳನ್ನು ಗಮನಿಸಬಹುದು. "ನಾಯಕರ ಟೀಕೆಗಳಲ್ಲಿ ವಿಗ್ರಹಭಂಜಕ ಪ್ರವೃತ್ತಿಯಿಲ್ಲ. ಮೆಚ್ಚುವಷ್ಟೇ ತೀವ್ರವಾಗಿ ಅವರು ಟೀಕಿಸುತ್ತಾರೆ. ಅದು ಅವರ ಭಾವ ತೀವ್ರತೆಯ ಇನ್ನೊಂದು ರೂಪವಷ್ಟೇ[೩]" ಎನ್ನುವ ಮಾತು ಕೂಡ ನಾಯಕರ ವಿಮರ್ಶೆಯ ದೃಷ್ಟಿಕೋನಕ್ಕೆ ಸಾಕ್ಷಿಯಾಗುತ್ತದೆ. ನಾಯಕರು ಪ್ರಾಚೀನ ಸಾಹಿತ್ಯದಿಂದ ಆಧುನಿಕ ಸಾಹಿತ್ಯದವರೆಗಿನ ಸೃಜನಶೀಲ ಕೃತಿಗಳಲ್ಲಿ ಕೃತಿನಿಷ್ಠವಾಗಿಯೇ ವಿಮರ್ಶಿಸುತ್ತಾರೆ. ಈ ವಿಧಾನದ ಪ್ರಭಾವಕ್ಕೆ ನಾಯಕರು ಒಳಗಾಗಿರುವುದು ಇದಕ್ಕೆ ಪ್ರಮುಖ ಕಾರಣ. ನಾಯಕರು ವಿಮರ್ಶೆ ಮಾಡುವ ಕಾಲದಲ್ಲಿ ನವ್ಯದ ಅನಂತಮೂರ್ತಿ, ಎಂ.ಜಿ. ಕೃಷ್ಣಮೂರ್ತಿ, ಕೀರ್ತಿನಾಥ ಕುರ್ತಕೋಟಿ ಮೊದಲಾದ ವಿಮರ್ಶಕರಿಗಿಂತ ಭಿನ್ನವಾದ ವಿಮರ್ಶೆಯ ತಾತ್ವಿಕ ಸ್ವರೂಪವನ್ನು ರೂಪಿಸಿಕೊಳ್ಳುವ ಅಗತ್ಯವಿತ್ತು. ಆದ್ದರಿಂದಲೇ ನಾಯಕರು ಅವರಿಗಿಂತಲೂ ಭಿನ್ನವಾಗಿ ವಿಮರ್ಶೆಯ ವಿಧಾನಗಳನ್ನು ಕಟ್ಟಿಕೊಂಡರು. ತಮ್ಮ ವಿಮರ್ಶೆಯ ಲೇಖನಗಳಲ್ಲಿ ಎಲ್ಲಿಯೂ ಪಾಶ್ಚಾತ್ಯ ವಿಮರ್ಶಕರ ಹೆಸರನ್ನು ನಾಯಕರು ನಮೂದಿಸಿಲ್ಲ. ಹಾಗೂ ಕನ್ನಡ ಸಾಹಿತ್ಯವನ್ನು ಕನ್ನಡ ಸಾಹಿತ್ಯ ಪರಂಪರೆಯೊಂದಿಗೆಯೇ ಅನುಸಂಧಾನಮಾಡಿ ವಿಮರ್ಶಿಸು ತ್ತಾರೆ ಹೊರತು ಕನ್ನಡ ಕೃತಿಗಳನ್ನು ಪಾಶ್ಚಾತ್ಯ ಸಾಹಿತ್ಯ ಪರಂಪರೆಯೊಂದಿಗೆ ಹೋಲಿಸುವುದಿಲ್ಲ.

ನಾಯಕರು ಸಾಹಿತ್ಯಾಧ್ಯಯನದ ಸಂದರ್ಭದಲ್ಲಿ ನಾಲ್ಕು ರೀತಿಯ ಉದ್ದೇಶಗಳೊಡನೆ ಕೃತಿಯೊಳಗೆ ಪ್ರವೇಶಿಸುತ್ತಾರೆ. ಅವೆಂದರೆ ೧)ಮೌಲ್ಯಮಾಪನ, ೨)ತೌಲನಿಕ ಮೌಲ್ಯಮಾಪನ, ೩)ಪುನರ್‌ಮೌಲ್ಯಮಾಪನ, ೪)ಪ್ರಾಯೋಗಿಕ ವಿಮರ್ಶೆ. ಈ ನಾಲ್ಕು ರೀತಿಯ ವಿಮರ್ಶಾ ಕ್ರಮಗಳನ್ನು ಅಧ್ಯಯನದ ದೃಷ್ಟಿಯಿಂದ ಪ್ರತ್ಯೇಕವಾಗಿ ಚರ್ಚಿಸಲಾಗಿದೆ.

## ೩.೧.೧. ಮೌಲ್ಯಮಾಪನ

ಇದು ನಾಯಕರ ವಿಮರ್ಶಾ ವಿಧಾನದಲ್ಲಿ ಪ್ರಮುಖವಾದದ್ದು. ವಸ್ತುನಿಷ್ಠ ವಿಮರ್ಶೆ, ಕೃತಿನಿಷ್ಠವಿಮರ್ಶೆಯ ಸಂದರ್ಭದಲ್ಲಿ ಅವರ ವಿಮರ್ಶಾ ನಿಲುವುಗಳು ಗಮನೀಯವಾದವು. ಕೃತಿಯೊಂದರ ಅಂತಸ್ಸತ್ವವನ್ನು ಪರೀಕ್ಷಿಸಿ ಅದರ ಮೌಲ್ಯಮಾಪನ ಮಾಡುವಾಗ ವಿಧಾನದಲ್ಲಿ ನಾಯಕರು ಬಹು ಪ್ರಬುದ್ಧತೆಯಿಂದ ನಿರ್ಣಯಿಸುತ್ತಾರೆ. ಸಮಕಾಲೀನ ವಿಮರ್ಶಕರಿಗೆ ಭಿನ್ನವಾಗಿ ವಿಮರ್ಶಿಸುವ ವಿಧಾನ ಅವರಲ್ಲಿ ಕಾಣಬರುತ್ತದೆ. ಅನೇಕ ವಿಮರ್ಶಕರು ಗುರುತಿಸಿದಂತೆ "ಸಾಹಿತ್ಯ ವಿಮರ್ಶೆಯಲ್ಲಿ ನವ್ಯ ವಿಮರ್ಶೆ ಏಕತತ್ವ; ಅದು ಕೃತಿಯಲ್ಲಿ ಏಕತೆಯನ್ನು ನಿರೀಕ್ಷಿಸುವ ಹಾಗೆಯೆ ಬಹುತ್ವವನ್ನು ನಿರಾಕರಿಸುತ್ತದೆ" ಎಂಬ ಧೋರಣೆಗೆ ನಾಯಕರು ಅಪವಾದವಾಗಿದ್ದಾರೆ. ಬಹುಮುಖಿ ನೆಲೆಯಲ್ಲಿ ಮೌಲ್ಯನಿರ್ಣಯವನ್ನು ಕೈಗೊಳ್ಳುವುದು ಅವರ ಹೆಗ್ಗಳಿಕೆಗಳಲ್ಲಿ ಒಂದು. ಕೃತಿಯೊಂದನ್ನು ಪರಿಶೀಲಿಸುವಾಗ ವಸ್ತು ಮತ್ತು ಅದರ ನಿರ್ವಹಣೆಯ ಕ್ರಮದ ಜೊತೆಗೆ ಯಾವ ರೀತಿಯ ಅನುಸಂಧಾನವಾಗಿದೆ ಎಂಬುದನ್ನು ಒರೆಗೆ ಹಚ್ಚಿ ಮೌಲ್ಯಮಾಪನ ಮಾಡುವ ಕ್ರಮವು ಗಾಢವಾಗಿ ಕಾಣಬರುತ್ತದೆ. ಉದಾಹರಣೆಗೆ ಕಾರಂತರ 'ಅಳಿದ ಮೇಲೆ', ಚದುರಂಗರ 'ಇಲಿಬೋನು' ಮಾಸ್ತಿಯವರ 'ಕಾಕನಕೋಟೆ ಒಂದು ಅಧ್ಯಯನ' (ನಿರಪೇಕ್ಷ) ಮುಂತಾದ ನಾಯಕರ ಲೇಖನಗಳು ಮೌಲ್ಯಮಾಪನ ಕ್ರಮವನ್ನು ದೃಷ್ಟಿಯಲ್ಲಿರಿಸಿಕೊಂಡು ರಚಿತವಾದವು.

ಮೌಲ್ಯನಿರ್ಣಯದ ಸಂದರ್ಭದಲ್ಲಿ ಪರಿಪಕ್ವ ಮತ್ತು ಪರಿಶ್ರಮದ ಮೂಲಕ ಕೃತಿಗೆ ನ್ಯಾಯ ದೊರಕಿಸಿಕೊಡುವುದು ಜಿ.ಎಚ್.ನಾಯಕರ ಉದ್ದೇಶವಾಗಿದೆ. "ವಿಮರ್ಶೆಯಲ್ಲಿ ಸಂಪೂರ್ಣ ವಸ್ತು ನಿಷ್ಠತೆ ಸಾಧ್ಯವಿಲ್ಲ ಎಂಬ ತಾತ್ವಿಕ ಸಂಕೋಚದಿಂದಲೋ ಅಥವಾ ಇನ್ನಿತರ ಲೌಕಿಕ ಸಂಕೋಚ ದಿಂದಲೋ ವಿಮರ್ಶಕ 'ಮೌಲ್ಯಮಾಪನ' ಹೊಣೆಗಾರಿಕೆಯಿಂದ ನುಣುಚಿಕೊಳ್ಳುವುದನ್ನು ಜಿ.ಎಚ್. ನಾಯಕರು ತಮ್ಮ ಲೇಖನಗಳಲ್ಲಿ ವಿರೋಧಿಸುತ್ತಾರೆ. ಉತ್ತಮವಾದ ಸಂವೇದನೆಯಿಂದ ಪ್ರಾಪ್ತವಾದ ಅನುಭವವನ್ನು ಎಚ್ಚರದ ಸ್ಥಿತಿಯಲ್ಲಿ ಶೋಧಿಸಿ ಭಾಷೆಯಲ್ಲಿ ಸಾಕ್ಷಾತ್ಕಾರಗೊಳಿಸುವುದು ಸಾಹಿತಿಯ ಕೆಲಸ. ಈ ಸಾಹಿತ್ಯ ಕರ್ಮದ ಜ್ಞಾನವೇ ನಾವು ಕೃತಿಯ ಸಾರ್ಥಕತೆಯನ್ನು ನಿರ್ಧರಿಸಲು ಬಳಸುವ ವಿಮರ್ಶಾತಂತ್ರಗಳ ತಳಹದಿಯಾಗಬೇಕು ಎಂಬ ದೃಢವಾದ ಅನಿಸಿಕೆ ಜಿ.ಎಚ್. ನಾಯಕರ ಲೇಖನಗಳಲ್ಲಿ ಅವುಗಳನ್ನು ಒಂದುಗೂಡಿಸುವ ಸೂತ್ರದಂತೆ ಕ್ರಿಯಾಶೀಲವಾಗಿದೆ[೪]" ಜಿ.ಎಚ್. ನಾಯಕರ ಬಗೆಗಿನ ದಾಮೋದರ ರಾವ್ ಅವರ ಈ ಮಾತು ಅರ್ಥಪೂರ್ಣವಾದದ್ದು. ಇದು ನಾಯಕರ ಮೌಲ್ಯಮಾಪನ ವಿಮರ್ಶಗುಣವನ್ನು ಒತ್ತಿ ಹೇಳುತ್ತದೆ. ವಿಮರ್ಶಾತಂತ್ರಗಳಲ್ಲಿ ಶೋಧನೆ

ಮತ್ತು ಮೌಲ್ಯಮಾಪನ ಕ್ರಮವು ಆತ್ಯಂತಿಕವಾಗಿ ಬರಬೇಕಾಗಿದೆ' ಅದು ನಾಯಕರಲ್ಲಿ ಒಡಮೂಡಿದೆ ಎಂಬ ಅಭಿಪ್ರಾಯವನ್ನು ದಾಮೋದರ್ ರಾವ್ ಅವರು ವ್ಯಕ್ತಪಡಿಸುತ್ತಾರೆ.

ನಾಯಕರ ವಿಮರ್ಶೆಯಲ್ಲಿ ಒಬ್ಬ ಲೇಖಕ ಮತ್ತು ಅದೇ ಲೇಖಕನ ಒಂದೇ ಕೃತಿಯನ್ನು ಕುರಿತಾದ ಮೌಲ್ಯಮಾಪನ ಕ್ರಮ ಕೈಗೊಳ್ಳುವುದು ಪ್ರಾಯೋಗಿಕ ವಿಮರ್ಶೆಗೆ ಒಳಪಡಿಸಿದ ಕೃತಿಗಳಲ್ಲಿ ಈ ಮೌಲ್ಯಮಾಪನ ಕಾರ್ಯವನ್ನು ನಾಯಕರು ಮಾಡ ಬಯಸುತ್ತಾರೆ. 'ಮಾಸ್ತಿಯವರ ಕಾಕನಕೋಟೆ; ಒಂದು ಅಧ್ಯಯನ' ಎಂಬ ಲೇಖನದಲ್ಲಿ ಈ ಬಗೆಯ ಮೌಲ್ಯಮಾಪನವನ್ನು ಗುರುತಿಸಬಹುದು. "ನಾಟಕಕಾರನಿಗೆ ತಾನು ನಿರ್ವಹಿಸುವ ವಸ್ತು ಮತ್ತು ಆಶಯದ ಬಗ್ಗೆ ಸಮಗ್ರವಾದ ತಿಳುವಳಿಕೆ ಮತ್ತು ಕಲಾತ್ಮಕ ಏಕಾಗ್ರತೆ ಅಗತ್ಯ ಪ್ರಮಾಣದಲ್ಲಿ ಇಲ್ಲವೇನೋ, ಎಂದು ಅನಿಸುವಂತಾಗುತ್ತದೆ" (ನಿರಪೇಕ್ಷ-ಪು ೧೩೮) ಎಂದು ಅವರು ಹೇಳುತ್ತಾರೆ. 'ಚದುರಂಗರ ಇಲಿಬೋನು' ಲೇಖನದಲ್ಲಿ ನಾಯಕರು "'ಇಲಿಬೋನು' ನಾಟಕ ಮಹತ್ವಾಕಾಂಕ್ಷೆಯ ನಾಟಕ. ನಾಟಕದ ಅಪೇಕ್ಷೆಯನ್ನು ಸಮರ್ಥವಾಗಿ ಭರಿಸುವುದಕ್ಕೆ ನಾಟಕದ ಹಂದರಕ್ಕೆ ಪೂರ್ಣ ಸಾಮರ್ಥ್ಯಸಾಲದೇನೋ ಎನಿಸಬಹುದು....... ಈ ನಾಟಕದಲ್ಲಿ, ಮಾತುಗಳಲ್ಲಿ ಧ್ವನಿತವಾಗುವ ಅರ್ಥ ಶಕ್ತಿಯೇ ಹೆಚ್ಚಾಗಿ ಘಟನೆಗಳ ಮೂಲಕ ಪ್ರತ್ಯಕ್ಷವಾಗಿ ಗಟ್ಟಿಯಾಗಬಹುದಾದ ಅನುಭವ ಸಂಪತ್ತು ಆ ಪ್ರಮಾಣದಲ್ಲಿ ಇದ್ದಂತೆ ಅನಿಸುವುದಿಲ್ಲ" (ಅದೇ ೧೫೯) ಎನ್ನುತ್ತಾರೆ.

ತೀ.ನಂ.ಶ್ರೀ ಅವರ ಬಗೆಗೆ ಜಿ.ಎಚ್. ನಾಯಕರ ವಿಮರ್ಶಾಪ್ರಜ್ಞೆ 'ಪಂಪಪ್ರಶಸ್ತಿ; 'ಆಚಾರ್ಯ' ಕೃತಿಯ ತೀ.ನಂ.ಶ್ರೀ' ಲೇಖನದ ಸಂದರ್ಭದಲ್ಲೂ ತನ್ನ ಮೌಲ್ಯಮಾಪನ ಗುಣವನ್ನು ಬಿಟ್ಟುಕೊಡುವುದಿಲ್ಲ. "ಭಾರತೀಯ ಕಾವ್ಯ ಮೀಮಾಂಸೆ ಪ್ರಕಾರ ಕಾವ್ಯದ ಪರಮ ಪ್ರಯೋಜನ ರಸಾನುಭವ. ಆ ಪರಿಕಲ್ಪನೆಯನ್ನು ನಂಬಿಕೆಯ ನೆಲೆಯಲ್ಲಿಯೆ ಒಪ್ಪಿ ವ್ಯವಹರಿಸುವ ತೀ.ನಂ.ಶ್ರೀ ಅವರ ವಿಮರ್ಶನ ಪ್ರಜ್ಞೆಯು ಸಹೃದಯತೆ, ರಸಜ್ಞತೆಗಿಂತ ಹೆಚ್ಚಿನ ವ್ಯಾಪ್ತಿ ಪಡೆಯಲಿಲ್ಲ; ಸಂಕೀರ್ಣತೆಯನ್ನು ಎದುರಿಸಲಿಲ್ಲ" (ಗುಣಗೌರವ-ಪುಟ-೯೯) ಎಂದು ಅವರು ಹೇಳುತ್ತಾರೆ.

ಬಸವರಾಜ ಕಟ್ಟೀಮನಿ ನಿಧನರಾದ ಸಂದರ್ಭದಲ್ಲಿ ಬರೆದ 'ಕಾದಂಬರಿಕಾರ ಕಟ್ಟೀಮನಿ' ಲೇಖನವು ಮೌಲ್ಯಮಾಪನದ ದಿಟ್ಟತೆಯ ಕ್ರಮವನ್ನು ನಾಯಕರು ಕೈ ಬಿಡುವುದಿಲ್ಲ ಎಂಬುದಕ್ಕೆ ಸಾಕ್ಷಿಯಾಗಿದೆ' "ಬದುಕಿನ ಸಂದಿಗ್ಧತೆ ಸಂಕೀರ್ಣತೆಗಳನ್ನು ಗ್ರಹಿಸುವಂಥ ಸೂಕ್ಷ್ಮ ಸಂವೇದನಶೀಲತೆ ಅಲ್ಲಲ್ಲಿ ಕಾಣಿಸುವುದುಂಟು, ಕಂಡದ್ದನ್ನು ಕಂಡಂತೆ ಹೇಳುವುದೇ ಸಾಹಿತ್ಯದಲ್ಲಿ ವಾಸ್ತವತೆ ಎಂಬುದು ಅವರ ತಿಳಿವಳಿಕೆಯಾಗಿದ್ದಂತೆಯೂ ತೋರುತ್ತದೆ." (ಅದೇ-ಪುಟ-೧೨೩)

ಈ ನಿದರ್ಶನದಲ್ಲಿ ಗಮನಿಸಿದಾಗ ನಾಯಕರು ಮೌಲ್ಯನಿರ್ಣಯ ಮಾಡುವಾಗ ತಮ್ಮದೇ ಆದ ನಿಷ್ಠುರ ನಿಲುವಿನ ಮೌಲ್ಯಮಾಪನ ಕ್ರಮವೊಂದನ್ನು ಅನುಸರಿಸಿಬಿಡುತ್ತಾರೆ ಎಂಬುದು ಇಲ್ಲಿ ವೇದ್ಯವಾಗುತ್ತದೆ. ಮೌಲ್ಯಮಾಪನದಲ್ಲಿ ಕೃತಿಯ ಅವಗುಣಗಳನ್ನಷ್ಟೇ ನಾಯಕರು ಗುರುತಿಸುವುದಿಲ್ಲ. ಅದರ ಜೊತೆಗೆ ಆ ಕೃತಿಯ ಮಹತ್ವ ಮತ್ತು ಗುಣಗಳನ್ನು ಸಹ ಮೌಲ್ಯೀಕರಿಸುತ್ತಾರೆ. ಈ ವಿಧಾನ ಬಹುತೇಕ ನಾಯಕರ ಎಲ್ಲಾ ವಿಮರ್ಶೆಗಳಲ್ಲೂ ಕಾಣುತ್ತದೆ.

### ೩.೧.೨. ತೌಲನಿಕ ಮೌಲ್ಯಮಾಪನ

ಮೌಲ್ಯಮಾಪನ ಕ್ರಮ ಮತ್ತು ಪುನರ್‌ಮೌಲ್ಯಮಾಪನ ಕ್ರಮದ ಜೊತೆಗೆ ಭಿನ್ನವಾದ ತೌಲನಿಕ ಮೌಲ್ಯಮಾಪನ ಮಾದರಿ ಜಿ.ಎಚ್. ನಾಯಕರ ವಿಮರ್ಶೆಯಲ್ಲಿ ವ್ಯಾಪಕವಾಗಿದೆ. ಇವೆರೆಡರ ಜೊತೆ ಹೋಲಿಸಿದಾಗ ತೌಲನಿಕ ಮೌಲ್ಯಮಾಪನ ಮಾದರಿ ನಾಯಕರಲ್ಲಿ ಭಿನ್ನವಾಗಿ ಗೋಚರಿಸುತ್ತದೆ. ನಾಯಕರ ವಿಮರ್ಶೆಯ ಬಗೆಗೆ ವಿಮರ್ಶಿಸಿರುವ ದಾಮೋದರ್‌ರಾವ್ ಬಿ, ಶ್ಯಾಮಸುಂದರ ಬಿದರಕುಂದಿ ಮೊದಲಾದ ವಿಮರ್ಶಕರು ತೌಲನಿಕ ಮೌಲ್ಯಮಾಪನ ಕ್ರಮವನ್ನು ಗುರುತಿಸುವ ಪ್ರಯತ್ನಮಾಡಿಲ್ಲ. ಆದರೆ ಈ ಅಧ್ಯಯನ ಮಾಡುವ ಸಂದರ್ಭದಲ್ಲಿ ಗಮನಿಸಿದಂತೆ ನಾಯಕರಲ್ಲಿ ಈ ಮಾದರಿಯೊಂದಿದೆ ಅನ್ನಿಸಿತು. ಆದ್ದರಿಂದ ಇದನ್ನು ಪ್ರತ್ಯೇಕವಾಗಿ ಅಧ್ಯಯನದಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಆದ್ದರಿಂದ ನಾಯಕರಲ್ಲಿ ತೌಲನಿಕ ಮೌಲ್ಯಮಾಪನ ಕ್ರಮದ ಇರುವಿಕೆಯನ್ನು ಈ ಕೆಳಗಿನಂತೆ ಗುರುತಿಸಬಹುದು ಅವುಗಳೆಂದರೆ:-

೧. ಒಬ್ಬ ಕವಿಗೂ ಮತ್ತೊಬ್ಬ ಕವಿಗೂ ಕಾಣಬರುವ ಅಭಿವ್ಯಕ್ತಿ ಕ್ರಮದಲ್ಲಿನ ಭಿನ್ನತೆಯನ್ನು ಗುರುತಿಸುತ್ತಾರೆ. ಇವರಿಬ್ಬರ ನಡುವೆ ಯಾರು ಸೃಜನಶೀಲ ಕವಿ ಮತ್ತು ಮಹಾನ್ ಸಾಹಿತಿ ಎಂದು ಮೌಲ್ಯೀಕರಿಸುವ ಸಂದರ್ಭದಲ್ಲಿ ತೌಲನಿಕ ಮೌಲ್ಯಮಾಪನ ಕ್ರಮವನ್ನು ಅನುಸರಿಸುತ್ತಾರೆ. ಪ್ರಾಚೀನ ಸಾಹಿತ್ಯ ಪಂಥಗಳ ನಡುವೆಯೂ ಸ್ವತಂತ್ರ ಸಾಹಿತ್ಯ ರಚನೆಗೆ ತೊಡಗಿರುವ ವೀರಶೈವ ಸಾಹಿತ್ಯವನ್ನು ಸ್ವೋಪಜ್ಞ ಸಾಹಿತ್ಯ ಪರಂಪರೆಯ ಉತ್ಕರ್ಷ ಕಾಲವೆಂದು ಗುರುತಿಸುವ ಸಂದರ್ಭದಲ್ಲೂ ಈ ಮಾದರಿಯನ್ನು ನಾಯಕರು ಅನುಸರಿಸುತ್ತಾರೆ. ಸಮಕಾಲೀನ ಪರಂಪರೆ ಮತ್ತು ಪ್ರಾಚೀನ ಸಾಹಿತ್ಯದ ಬಗ್ಗೆ ಮಾತನಾಡುವಾಗಲೂ ಸಾಹಿತ್ಯ ಪರಂಪರೆಯೊಂದಿಗೆ ತೌಲನಿಕ ಮೌಲ್ಯಮಾಪನ ಮಾಡುತ್ತಾರೆ.

೨. ಒಬ್ಬನೆ ಲೇಖಕನ ಒಂದು ಕೃತಿಗೂ ಮತ್ತು ಅವನ ಇನ್ನಿತರ ಕೃತಿಗಳಿಗೂ ಸ್ವೋಪಜ್ಞತೆ ಅಭಿವ್ಯಕ್ತಿ ಮತ್ತು ಸೃಜನಶೀಲತೆಯಲ್ಲಿ ಯಾವ ಕೃತಿಶ್ರೇಷ್ಠ ಎಂದು ಕ್ವಚಿತ್ತಾಗಿ ಮೌಲ್ಯೀಕರಿಸುವ ಸಂದರ್ಭದಲ್ಲಿ ತೌಲನಿಕ ಮೌಲ್ಯಮಾಪನ ಮಾದರಿ ಕಾಣುತ್ತದೆ.

೩. ಕನ್ನಡ ಸಾಹಿತ್ಯ ಪಂಥಗಳಲ್ಲಿ ಯಾವ ಸಾಹಿತ್ಯ ಪಂಥ ಭಾಷೆ, ವಸ್ತು, ಅಭಿವ್ಯಕ್ತಿಯಲ್ಲಿ ಭಿನ್ನಪರಂಪರೆಯನ್ನು ಕಟ್ಟಿಕೊಂಡು ಸೃಜನಾತ್ಮಕವಾಗಿ ಬೆಳೆದಿದೆ ಎಂಬುದನ್ನು ಗುರುತಿಸುವಾಗಲೂ ನಾಯಕರು ಈ ಕ್ರಮವನ್ನು ಅನುಸರಿಸಿದ್ದಾರೆ.

ನಡುಗನ್ನಡ ಕಾವ್ಯಕ್ಕೆ ಸ್ಪಂದಿಸುವಾಗಲೂ ಸಹ ನಾಯಕರು ಕೃತಿನಿಷ್ಠ ವಿಮರ್ಶೆ ಮಾಡುತ್ತಾರೆ. 'ಹರಿಶ್ಚಂದ್ರ ಕಾವ್ಯ; ಓದು ವಿಮರ್ಶೆ' ಕೃತಿಯು ಒಂದು ಕೃತಿನಿಷ್ಠ ವಿಮರ್ಶೆಯಾಗಿದೆ. ಇಲ್ಲಿಯೂ ಮೌಲ್ಯಮಾಪನ ಕ್ರಮವು ಸುಳಿದಿದೆ. 'ಓದು' ಭಾಗದಲ್ಲಿ ನಡುಗನ್ನಡದ ಕಾವ್ಯವನ್ನು ನಾಯಕರು ಗದ್ಯದಲ್ಲಿ ಸರಳಾನುವಾದ ಮಾಡಿ ಪರಿಚಯಿಸುತ್ತಾರೆ. ಎರಡನೇ ಭಾಗ 'ವಿಮರ್ಶೆ'ಯಲ್ಲಿ ಕೃತಿಯ ಕಥಾಸಾರ, ಆಕರ, ಕಥಾ ಸಂವಿಧಾನ, ಪಾತ್ರಚಿತ್ರಣ, ನಾಟಕ ಪ್ರತಿಭೆ, ವರ್ಣನೆ ಕೌಶಲ, ಭಾಷೆ, ಶೈಲಿ ಎಂಬ ಭಾಗಗಳಲ್ಲಿ ತಮ್ಮ ವಿಮರ್ಶಾತ್ಮಕ ಧೋರಣೆಯನ್ನು ಅಭಿವ್ಯಕ್ತಿಸುತ್ತಾರೆ. 'ನಾಟಕಪ್ರತಿಭೆ'ಯ ಭಾಗದಲ್ಲಿ "ಹರಿಶ್ಚಂದ್ರ ಚಾರಿತ್ರ್ಯ'ದಲ್ಲಿ ಚುರುಕು, ಚೂಪು, ವೇಗ, ಲವಲವಿಕೆಗಳು ಉತ್ತಮ ಮಟ್ಟದಲ್ಲಿ ಮೂಡಿವೆ. ಆದರೆ 'ಗದಾಯುದ್ಧ' ದಲ್ಲಿ ಈ ರೀತಿಯ ಚುರುಕುತನವಿಲ್ಲ." ಮತ್ತು "ಸಾರ್ವತ್ರಿಕ ಮೌಲ್ಯವಾದ 'ಸತ್ಯ'ವನ್ನೂ ಮತಧರ್ಮದ ಪರಿಕಲ್ಪನೆಯ ಹಿನ್ನೆಲೆ, ಮಿತಿಗಳಲ್ಲಿಯೇ ನಿರ್ವಹಿಸಲು ಹೊರಟ್ಟದ್ದರಿಂದ, ರಾಘವಾಂಕನಲ್ಲಿ ಪ್ರತಿಭೆ ಪಾಂಡಿತ್ಯಗಳ ಕೊರತೆ ಹೆಚ್ಚಾಗಿ ಕಾಣದಿದ್ದರೂ, ತಾತ್ವಿಕ ಒಳನೋಟದ ಕೊರತೆ ಮೇಲೆದ್ದು ಕಾಣುವಂತಾಗಿದೆ. "ಇಷ್ಟಾದರೂ ಸೋದರಮಾವನೂ ಗುರುವೂ ಆ ಕಾಲದ ವೀರನಿಷ್ಠೆಯ ವೀರಶೈವನೂ ಕಾವ್ಯಮಾರ್ಗ ನಿರ್ಮಾಪಕನೂ ಆದ ಹರಿಹರನಿಗಿಂತ ಭಿನ್ನವಾದ ವಸ್ತು, ಧೋರಣೆಯ ಕಾವ್ಯವೊಂದನ್ನು ಬರೆಯುವ ಧೈರ್ಯಮಾಡಿದ್ದು ರಾಘವಾಂಕನ ಸ್ವೋಪಜ್ಞ ಪ್ರತಿಭೆ, ಸ್ವತಂತ್ರ ಮನೋಭಾವಗಳಿಗೆ ಸಾಕ್ಷಿಯಾಗಿದೆ." (ಹರಿಶ್ಚಂದ್ರಕಾವ್ಯ- ಓದು, ವಿಮರ್ಶೆ-೯೧) ಎಂದು ಹೇಳುವಾಗ ನಾಯಕರು ಕೃತಿನಿಷ್ಠತೆಯ ಮೂಲಕವೇ ಮೌಲ್ಯಮಾಪನ ಮತ್ತು ತೌಲನಿಕ ಮೌಲ್ಯ ನಿರ್ಣಯವನ್ನು ಮಾಡಿಬಿಡುತ್ತಾರೆ. ಇದು ನಾಯಕರ ವಿಮರ್ಶಾಗುಣ. ಅನುಭವವು ಕೃತಿಯ ಮೂಲಕ ತಮ್ಮ ಪ್ರಜ್ಞೆಗೆ ಸೇರಿ ಮಾಗುವಿಕೆಯ ಕ್ರಿಯೆಯೊಂದಿಗೆ ಅಭಿವ್ಯಕ್ತಗೊಳ್ಳಬೇಕು ಎಂಬ ನವ್ಯ ವಿಮರ್ಶೆಯ ಪರಧಿಯೊಳಗೆಯೆ ನಾಯಕರು ವಿಮರ್ಶಿಸುತ್ತಾರೆ. ಇದರಿಂದಾಗಿ ಹಳೆಯ ಕಾವ್ಯಗಳನ್ನು ತೌಲನಿಕ ಮೌಲ್ಯಮಾಪನ ಮಾಡುವ ಪ್ರಮುಖ ಧೋರಣೆಯು ಕೃತಿ ವಿಮರ್ಶೆಯೊಳಗಿನಿಂದಲೇ ಅವಲೋಕಿಸಲು ಪ್ರಯತ್ನಿಸುತ್ತಾರೆ. 'ಸಾಹಸ ಭೀಮ ವಿಜಯಂ' ಕೂಡ ಈ ರೀತಿಯ ವಿಮರ್ಶಾ ಮಾದರಿಯನ್ನು ಹೊಂದಿದೆ. ಇದು ತೌಲನಿಕ ಮೌಲ್ಯಮಾಪನದ ಮೊದಲ ಕ್ರಮಕ್ಕೆ ಉದಾಹರಣೆಯಾಗಿದೆ.

‘ಅನಂತಮೂರ್ತಿಯವರ ಕಥಾಸಾಹಿತ್ಯ’ ಹಾಗೂ ‘ತೇಜಸ್ವೀಯವರ ಸಾಹಿತ್ಯ’ ಲೇಖನಗಳಲ್ಲಿ ಗುರುತಿಸಬಹುದು. ಅನಂತಮೂರ್ತಿಯವರ ‘ಘೋಜರಾಜ’, ‘ಪ್ರಕೃತಿ’, ‘ಪ್ರಶ್ನೆ’, ‘ಕಾರ್ತೀಕ’, ‘ಪ್ರಸ್ತ’, ‘ಘಟಶ್ರಾದ್ಧಾ’ ಮತ್ತು ‘ಕ್ಲಿಪ್ ಜಾಯಿಂಟ್’ ಮೊದಲಾದ ಕಥೆಗಳು ಹಾಗೂ ‘ಸಂಸ್ಕಾರ’ ಕಾದಂಬರಿಯನ್ನು ಉದಾಹರಿಸುತ್ತಾರೆ. ಅವರ ಸಾಹಿತ್ಯದಲ್ಲಿ ಸೃಜನಾತ್ಮಕತೆ ಕಥಾಸಾಹಿತ್ಯ ಘನೋದ್ದೇಶ್ಯ, ನಿರ್ವಹಣೆಯ ವಿಧಾನ ಹಾಗೂ ಅಭಿವ್ಯಕ್ತಿ ಪ್ರಕ್ರಿಯೆ ಇವುಗಳನ್ನು ನಾಯಕರು ಗುರುತಿಸುತ್ತಾರೆ. ಹೀಗೆ ಅನಂತಮೂರ್ತಿ ಯವರ ಕಥೆ ಮತ್ತು ಕಾದಂಬರಿಗಳಲ್ಲಿ ಅಭಿವ್ಯಕ್ತಿ ಕ್ರಮದ ಬಗ್ಗೆ ತೌಲನಿಕ ಮೌಲ್ಯ ಮಾಪನ ಮಾಡುತ್ತಾರೆ. ಹಾಗೆಯೇ ತೇಜಸ್ವಿಯವರ ‘ಯಮಳ ಪ್ರಶ್ನೆ’ ನಾಟಕ ‘ನಿಗೂಢ ಮನುಷ್ಯರು’, ‘ಕರ್ವಾಲೋ’, ‘ಸ್ವರೂಪ’, ಮೌನ ಮೊದಲಾದ ಕೃತಿಗಳ ಜೊತೆ ತೌಲನಿಕ ಮೌಲ್ಯ ಮಾಪನವನ್ನು ಮಾಡುತ್ತಾರೆ. ಇವು ತೌಲನಿಕ ಮೌಲ್ಯ ಮಾಪನದ ಎರಡನೆಯ ಕ್ರಮಕ್ಕೆ ಗುರುತಿಸಬಹುದು. ಹಾಗೆಯೇ ‘ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ; ನನ್ನ ಅನಿಸಿಕೆಗಳು’ ಮತ್ತು ಇತರ ಕೆಲವು ಲೇಖನಗಳಲ್ಲಿ ನವ್ಯ ಸಾಹಿತ್ಯ ಕೃತಿಗಳನ್ನು ವಿಮರ್ಶೆಗೆ ಒಳಪಡಿಸುವಾಗ ಪ್ರಾಚೀನ, ನವೋದಯ, ಪ್ರಗತಿಶೀಲ, ನವ್ಯ ಮತ್ತು ನವ್ಯೋತ್ತರ ಸಾಹಿತ್ಯ ಕ್ರಮಗಳಿಗೆ ತೌಲನಿಕವಾಗಿ ಮೌಲ್ಯಮಾಪನವನ್ನು ನಾಯಕರು ಮಾಡುತ್ತಾರೆ. ಇದು ಮೂರನೆಯ ಕ್ರಮಕ್ಕೂ ಅನ್ವಯವಾಗುತ್ತವೆ.

## ೩.೧.೩. ಪುನರ್‌ಮೌಲ್ಯಮಾಪನ

ಕನ್ನಡದಲ್ಲಿ ನವ್ಯ ಸಾಹಿತ್ಯ ವಿಮರ್ಶೆ ಬೆಳೆಯುತ್ತಿರುವ ಹೊತ್ತಿಗೆ ಹಳೆಗನ್ನಡ ಕೃತಿಗಳ ಸಾಹಿತ್ಯಾಧ್ಯಯನದ ವಿಶ್ಲೇಷಣೆ ನಡೆಯುತಿತ್ತು. ಅದೇ ಹಳೆಗನ್ನಡ ಕೃತಿಗಳ ಬಗೆಗೆ ಬಂದ ವಿಮರ್ಶೆಗಳನ್ನು ‘ಪುನರ್‌ಮೌಲ್ಯಮಾಪನ’ ಎಂಬ ಪರಿಕಲ್ಪನೆಯೊಂದಿಗೆ ವಿಶ್ಲೇಷಿಸುವ ಪರಂಪರೆ ಯೊಂದು ನವ್ಯ ಸಂದರ್ಭದಲ್ಲಿ ಉಗಮಗೊಂಡಿತು. ಪುನರ್ ಮೌಲ್ಯಮಾಪನವು ಪಾಶ್ಚಾತ್ಯ ಸಾಹಿತ್ಯ ವಿಮರ್ಶೆಯಿಂದ ಕನ್ನಡ ವಿಮರ್ಶೆಗೆ ಬಂದಿದೆ. ‘ಪುನರ್‌ಮೌಲ್ಯಮಾಪನ’ ಪರಿಕಲ್ಪನೆಯು ಎಫ್.ಆರ್.ಲೀವೀಸ್‌ನ ಕೊಡುಗೆಯಾಗಿದೆ. ಇದು ‘ಪುನರ್‌ಮೌಲ್ಯೀಕರಣ’ ಎಂದೂ ಕೂಡ ಬಳಕೆಯಾಗುತ್ತಿದೆ. ಇದನ್ನು ಜಿ.ಎಚ್. ನಾಯಕರು ಸಾಹಿತ್ಯ ವಿಮರ್ಶೆಯ ಸಂದರ್ಭದಲ್ಲಿ ಹೆಚ್ಚಾಗಿ ಬಳಸಿದ್ದಾರೆ. ಬರಗೂರರು ಇಂತಹ ಪರಿಕಲ್ಪನೆಯನ್ನು ಕುರಿತು “ಪುನರ್‌ಮೌಲ್ಯೀಕರಣ ಪರಿಕಲ್ಪನೆಯು ನಿರಾಕರಣೆಯ ನೆಲೆಯಿಂದ ಹುಟ್ಟಿದ್ದಲ್ಲ ಅದು ಕಟ್ಟಕಡೆಯ ತೀರ್ಮಾನವೂ ಅಲ್ಲ ‘ಮೌಲ್ಯೀಕರಣ’ ಎಂಬ ಮಾತೇ ನಿರಂತರತೆಯನ್ನು ಸೂಚಿಸುತ್ತದೆ; ನಿಲುಗಡೆಯನ್ನು ಸೂಚಿಸು ವುದಿಲ್ಲ. ನಿರಂತರತೆಯನ್ನುವುದು ಕಾಲಘಟ್ಟಗಳು ಜಡಗಟ್ಟುವುದನ್ನು ತಿಳಿಸುವ ಒಂದು ತೀವ್ರತೆ. ಇಂಥ ತೀವ್ರತೆಯ ಹಿನ್ನೆಲೆಯಲ್ಲಿ ಕಾಲಘಟ್ಟವೊಂದು ದೊರಕಿಸಿಕೊಟ್ಟ ಅನುಭವ ಮತ್ತು ಅರಿವಿನ

ಬೆಳಕಿನಲ್ಲಿ ನಡೆಸುವ ನಿರ್ದಿಷ್ಟ ಶೋಧವಾಗಿ ಪುನರ್‌ಮೌಲ್ಯೀಕರಣವನ್ನು ಪರಿಗಣಿಸಬೇಕು[೨೧]" ಎಂಬ ಮಾತು ಗಮನೀಯವಾದುದು. ಜಿ.ಎಚ್. ನಾಯಕರು ಹಳೆಗನ್ನಡ ಪದ್ಯಭಾಗಗಳನ್ನು ಪುನರ್ ವಿಮರ್ಶಿ ಸುವಾಗ ಆ ಕೃತಿಯ ಸಾರ್ಥಕತೆಯನ್ನು ಚರ್ಚೆಗೆ ತರುತ್ತಾರೆ. ಆದರೆ ಆ ಚರ್ಚೆ ಅಲ್ಲಿಗೆ ಮುಕ್ತಾಯವಾಯಿತೆಂಬ ಮನೋಧೋರಣೆಯಿಂದ ಅವರು ವಿಮರ್ಶಿಸಿದ ಯಾವುದೇ ಲೇಖನಗಳು ಉದಾಹರಣೆಗೆ ಸಿಕ್ಕುವುದಿಲ್ಲ. ಪುನರ್‌ಮೌಲ್ಯೀಕರಣ ದೃಷ್ಟಿಯಿಂದಲೇ ಅನೇಕ ಪ್ರಾಚೀನ ಸಾಹಿತ್ಯದ ಪದ್ಯಗಳನ್ನು ವಿಮರ್ಶಿಸುತ್ತಾರೆ. ಅವರದ್ದು ಸಾಹಿತ್ಯಿಕವಾದ ಪುನರ್ ಮೌಲ್ಯೀಕರಣವೇ ಹೊರತು ಸಾಮಾಜಿಕ ನೆಲೆಯದ್ದಲ್ಲ ಎಂಬ ಕಾರಣಕ್ಕೆ ಪುನರ್‌ಮೌಲ್ಯ ಮಾಪನ ಸೂಕ್ತವಾಗಿದೆ.

'ಪುನರ್‌ಮೌಲ್ಯಮಾಪನ' ಎನ್ನುವುದನ್ನು ಕನ್ನಡ ವಿಮರ್ಶಕರು ಗ್ರಹಿಸಿದ ನೆಲೆಯನ್ನು ಎಚ್.ಎಸ್.ಶ್ರೀಮತಿಯವರು ಹೀಗೆ ಹೇಳುತ್ತಾರೆ "ಒಂದು ಕೃತಿ ಒಂದು ವಿಮರ್ಶಾ ಪರಂಪರೆಯಲ್ಲಿ ತನ್ನ ಅರ್ಥ ಸಾಧ್ಯತೆಗಳನ್ನು ಪ್ರಕಟಿಸಿತೆಂದರೆ ಅಲ್ಲಿಗೆ ಆ ಕೃತಿಯ ಬಗೆಗೆ ವಿಮರ್ಶೆ ಮುಗಿಯಿತು ಎನ್ನುವಂತಿಲ್ಲ. ಸಾಹಿತ್ಯತತ್ವಗಳು, ವಿಮರ್ಶಾ ಮಾನದಂಡಗಳು ಬದಲಾಗುತ್ತ ಬೆಳೆಯುತ್ತಾ ಹೋದಂತೆ ಆ ಕವಿಕೃತಿ ವಿಮರ್ಶೆಯು ನಡೆಯುತ್ತಾ ಹೋಗ ಬೇಕು. ಹೀಗಾಗಿ ಈ ಕವಿಕೃತಿ ವಿಮರ್ಶೆ ಎನ್ನುವುದು ಅವಿಚ್ಛಿನ್ನವಾಗಿ ನಡೆಯುವ ಸಾಂಸ್ಕೃತಿಕ ಚಟುವಟಿಕೆ. ಹೀಗೆ ಒಂದು ಕೃತಿ ಹಾಗೂ ಒಂದು ಸಾಹಿತ್ಯ ಪರಂಪರೆ ಭಿನ್ನ ಸಾಹಿತ್ಯ ತತ್ವಗಳ ವಿಮರ್ಶಾ ಮಾನದಂಡಗಳ ಸಂದರ್ಭದಲ್ಲಿ ಮೌಲ್ಯಮಾಪನಕ್ಕೆ ಮರಳಿ ಒಳಗಾದಾಗ ಆ ಕೃತಿಯ ಸಾಹಿತ್ಯ ಪರಂಪರೆಯ ಹೊಸ ಚಹರೆಗಳು ಕಾಣಸಿಗುತ್ತವೆ. ಆದ್ದರಿಂದ ಪನರ್‌ಮೌಲ್ಯಮಾಪನ ಒಂದು ಸಾಂಸ್ಕೃತಿಕ ಜವಾಬ್ದಾರಿ[೨೨]" ಈ ಮಾದರಿಯ ವಿಮರ್ಶೆ ನಾಯಕರ ವಿಮರ್ಶೆಯಲ್ಲಿ ಹೇರಳವಾಗಿದೆ. ವಸ್ತು, ಸನ್ನಿವೇಶ, ಆಶಯಗಳು, ಭಾಷೆಯಲ್ಲಿ ಏಕೀಭವಿಸುವ ಕೌಶಲಗಳ ಮಾದರಿಯನ್ನು ಗಮನದಲ್ಲಿ ಕೇಂದ್ರೀಕರಿಸಿ ಕೊಂಡು ಪುನರ್ ವ್ಯಾಖ್ಯಾನಕ್ಕೆ ನಾಯಕರು ತೊಡಗುತ್ತಾರೆ. ನಾಯಕರಲ್ಲಿನ ಈ ಪುನರ್ ಮೌಲ್ಯಮಾಪನ ಕ್ರಮವನ್ನು ಎಚ್.ಎಸ್. ಶ್ರೀಮತಿಯವರು ಈ ಕೆಳಗಿನಂತೆ ಗುರುತಿಸುತ್ತಾರೆ. "ಅನುಭವದ ಅಧಿಕೃತತೆ ಹಾಗೂ 'ಅನುಭವ ಮತ್ತು ಅಭಿವ್ಯಕ್ತಿಗಳ ಸಾವಯವತೆ' ಈ ಎರಡೂ ನವ್ಯ ವಿಮರ್ಶೆಯಿಂದ ಹಳೆಗನ್ನಡ ಸಾಹಿತ್ಯ ಕೃತಿಗಳ ಪುನರ್‌ಮೌಲ್ಯಮಾಪನಕ್ಕೆಂದು ಪಡೆದುಕೊಂಡ ಮಾನದಂಡಗಳು...... ಅನುಭವ ಮತ್ತು ಅಭಿವ್ಯಕ್ತಿಗಳ ಸಾವಯವತೆಯ ನೆಲೆಯನ್ನು ಹಳೆಗನ್ನಡ ಕವಿ ಕೃತಿಗಳ ಸಂದರ್ಭದಲ್ಲಿ ಪ್ರಯುಕ್ತಗೊಳಿಸುವುದು ವಿಮರ್ಶಕರಿಗೆ ಸಾಧ್ಯವಾಯಿತು. ಈ ಯತ್ನವನ್ನು ನಿಷ್ಠೆಯಿಂದ ಬೆಳೆಸಿದವರೆಂದರೆ ಜಿ.ಎಚ್.ನಾಯಕರು ಪಂಪ ಮತ್ತು ರನ್ನ- ಇವರಿಬ್ಬರ ಬಗೆಗೆ ಬರೆದ ಲೇಖನಗಳಲ್ಲಿ ಈ ಬಗೆಯ ನಿದರ್ಶನಗಳು ದೊರಕುತ್ತವೆ. ಈ ಸಾವಯವತೆ ಅನ್ವಯ ಕೃತಿಗಳ ಭಾಗಗಳ ವಿಮರ್ಶೆಯಲ್ಲಿ ಉಚಿತವಾಗಿ ಕಂಡಷ್ಟು ಇಡೀ ಕೃತಿಯ ವಿಶ್ಲೇಷಣೆಗೆ ಒದಗಿ ಬರಲಿಲ್ಲ.

ಆದ್ದರಿಂದ ಹಳೆಗನ್ನಡ ಕವಿಗಳ ಅಭಿವ್ಯಕ್ತಿಯ ಗರಿಷ್ಠ ಸಾಧನೆಯನ್ನು ಅವರ ಕೃತಿಗಳ ಭಾಗಗಳಲ್ಲಿ ಮಾತ್ರ ಗುರುತಿಸುವುದು ಸಾಧ್ಯವಾಯಿತು." ಎಂಬ ಮಾತು ಗಮನಾರ್ಹವಾದದ್ದು. ಇಡೀ ಕಾವ್ಯದ ವಸ್ತುವನ್ನು ಸಮಗ್ರ ವಾಗಿ ದೃಷ್ಟಿಯಲ್ಲಿಟ್ಟುಕೊಂಡು ಮೌಲ್ಯೀಕರಿಸುವುದು ನಾಯಕರ ಗುಣ. ಅವರಲ್ಲಿ ಪ್ರಾಚೀನ ಸಾಹಿತ್ಯದ ಕೆಲವು ಬಿಡಿ ಬಿಡಿ ಪದ್ಯಗಳನ್ನು ಗುರುತಿಸಿಕೊಂಡು ಮರುಪರಿಶೀಲನೆ ಮಾಡುವ ಕ್ರಮವಿದೆ. ಸಮಗ್ರ ಪಠ್ಯದ ವಸ್ತುವನ್ನು ಕೇಂದ್ರೀಕರಿಸಿಕೊಂಡು ಪದ್ಯವೊಂದರ ಮರುಪರಿಶೀಲನೆಗೆ ನಾಯಕರು ತೊಡಗುತ್ತಾರೆ.

'ಪಂಪನ ಅಭಿವ್ಯಕ್ತಿ' 'ಪಂಪನ ಪದ್ಯವೊಂದರ ಪುನರ್‌ವಿಮರ್ಶೆ' 'ರನ್ನನ ಪದ್ಯವೊಂದರ ಪುನರ್ವಿಮರ್ಶೆ; ರನ್ನನ 'ಸಾಹಸಭೀಮ ವಿಜಯಂ' ಮತ್ತು 'ಆ ನೀರೊಳಗಿರ್ದುಂ ಬೆಮರ್ತನ್' ಲೇಖನಗಳಲ್ಲಿ ಪ್ರಾಚೀನ ಲೇಖಕರನ್ನೂ ನಾಯಕರು ಪುನರ್‌ಮೌಲ್ಯಮಾಪನದ ದೃಷ್ಟಿಯಿಂದ ವಿಮರ್ಶಿಸಿದ್ದಾರೆ. 'ಪಂಪನ ಪದ್ಯವೊಂದರ ಪನರ್‌ವಿಮರ್ಶೆ' ಲೇಖನದಲ್ಲಿ 'ಪಂಪಭಾರತ'ದ

> ಮೃಗಯಾ ವ್ಯಾಜದಿನೊರ್ಮೆ ಶಂತನು ತೋಳಲ್ತರ್ಪಂ ಪಳಂಚಲ್ಕೆ ತ।
> ನ್ಮೃಗ ಶಾಬಾಕ್ಷಿಯ ಕಂಪುತಟ್ಟಿ ಮಧುಪಂಬೋಲ್ ಸೋಲ್ತು ಕಂಡೊಲ್ದು ನ॥
> ಲ್ಮೆಗೆ ದಿಬ್ಯಂಬಿಡಿವಂತೆವೋಲ್ ಪಿಡಿದು ನೀಂ ಬಾ ಪೋಪಮೆಂದಂಗೆ ಮೆ।
> ಲ್ಲಗೆ ತತ್ಕನ್ಯಕೆ ನಾಣ್ಚಿ ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ॥

ಈ ಪದ್ಯಕ್ಕೆ ಹಲವು ವಿಮರ್ಶಕರು ಹಲವು ಅಭಿಪ್ರಾಯ, ಅರ್ಥ ವಿವರಣೆಗಳನ್ನು ಬರೆದಿದ್ದಾರೆ. ಅವರಲ್ಲಿ ಮೊದಲಿಗೆ ಡಿ.ಎಲ್. ನರಸಿಂಹಾಚಾರ್ 'ಪಂಪಭಾರತ ದೀಪಿಕೆ'ಯಲ್ಲಿ ನೀಡಿರುವ ಅರ್ಥವಿವರಣೆ, ಸಿ.ಪಿ.ಕೆ. ಅವರು 'ಆಲೋಚನ' ದಲ್ಲಿ ಈ ಪದ್ಯದ ಬಗ್ಗೆ ಹೇಳಿರುವ ಹೇಳಿಕೆ ಮತ್ತು 'ನೀಂ ಬಾ ಪೋಪಂ' ಎಂಬುದಕ್ಕೆ ನೀಡಿರುವ ಅರ್ಥ, ಕೆ.ಪಿ. ಪೂರ್ಣಂದ್ರ ತೇಜಸ್ವಿಯವರು 'ಪಂಪ–ಒಂದು ಮೌಲ್ಯವಿವೇಚನೆ'ಯಲ್ಲಿ ನೀಡಿರುವ ವ್ಯಾಖ್ಯಾನ ಮತ್ತು ಅರ್ಥವಿವರಣೆ, ಎನ್. ಅನಂತರಂಗಾಚಾರ್ ಅವರು 'ಪಂಪ ಕವಿಯ ಪಂಪ ಭಾರತದ ಗದ್ಯಾನುವಾದ' ದಲ್ಲಿ "ಪಳಂಚಲ್ಕೆ" ಎಂಬ ಪದಕ್ಕೆ ನೀಡಿರುವ ಅರ್ಥ, ಮತ್ತು ರಂ.ಶ್ರೀ ಮುಗಳಿ 'ಪಂಪನ ದೇಸಿ' ಕೃತಿ, ಹೀಗೆ ಇವರೆಲ್ಲರ ವಿಮರ್ಶೆಯನ್ನು ಕುರಿತು ತರ್ಕಿಸುತ್ತಾ ಜಿ.ಎಚ್. ನಾಯಕರು ಪುನರ್‌ಮೌಲ್ಯಮಾಪನ ಮಾಡುತ್ತಾರೆ. ಅಂತಿಮವಾಗಿ ನಾಯಕರು ಈ ಪದ್ಯಭಾಗದ ಕ್ರಮ ವಿಪರ್ಯಯದ ಬಗ್ಗೆ ಹೇಳುತ್ತಾರೆ. "ಈ ಕ್ರಮವಿಪರ್ಯಯದ ಕಥೆಯಲ್ಲಿ ಪಂಪನೂ ಪಾತ್ರ, ಸನ್ನಿವೇಶ, ರಚನಾ ವಿಧಾನ, ಧೋರಣೆಗಳಲ್ಲಿ ತನ್ನದೇ ಆದ ವಿಶಿಷ್ಟವಾದ ಬಗೆಯಲ್ಲಿ ಕ್ರಮ ವಿಪರ್ಯಯ ಮಾಡುವ ಸ್ವತಂತ್ರ ವಹಿಸಿದ್ದಾನೆ. ಈ ಸಂಗತಿಗಳನ್ನೆಲ್ಲ ವಿವರವಾಗಿ ಪರಿಶೀಲಿಸಿದಾಗ ಪಂಪನು ಮಹಾಭಾರತದ ಕಥೆಯನ್ನು ಕ್ರಮವಿಪರ್ಯಯದ ಕಥೆಯಾಗಿಯೂ

ಪರಿಭಾವಿಸಿರಬಹುದೆಂದು ಅನಿಸುತ್ತದೆ. ಆ ಕ್ರಮವಿಪರ್ಯಯದ ಬಿತ್ತನ್ನು ಶಂತನು–ಸತ್ಯವತಿಯರ ಸಂದರ್ಭದ ಶಂತನ ನಡವಳಿಕೆಯಲ್ಲಿಯೇ ಪಂಪನು ಗುರುತಿಸಿರಬಹುದೆಂದೂ ತೋರುತ್ತದೆ." (ನಿರಪಪೇಕ್ಷ–೭೮)ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ನಾಯಕರು ಮೇಲ್ಕಾಣಿಸಿದ ವಿಮರ್ಶಕರ ಹಿನ್ನಲೆಯಲ್ಲಿ ಈ ಅಭಿಪ್ರಾಯಗಳನ್ನು ನೀಡುತ್ತಾರೆ. ಮತ್ತು ಕೃತಿಯ ಬಗೆಗೆ ಸಮಗ್ರವಾದ, ಸರಿಯಾದ ವ್ಯಾಖ್ಯಾನವನ್ನು ನೀಡುತ್ತಾರೆ. ಈ ಮುಂಚೆ ಬಂದ ಈ ವ್ಯಾಖ್ಯಾನ ಮತ್ತು ಅಭಿಪ್ರಾಯಗಳನ್ನು ಮರು ಪರಿಶೀಲನೆಗೆ ಆಯ್ದುಕೊಂಡು ಪರಿಷ್ಕೃತ ಮಾದರಿಯ ವ್ಯಾಖ್ಯಾನವನ್ನಷ್ಟೆ ಮಂಡಿಸುತ್ತಾರೆ.

ಹಳಗನ್ನಡ ಪದ್ಯಗಳನ್ನು ಪುನರ್‌ವಿಮರ್ಶಿಸುವಾಗ ಭಾಷೆ, ವಸ್ತು, ಸನ್ನಿವೇಶಗಳನ್ನು ಮುಖ್ಯವಾಗಿ ಗಮನಿಸಿ ಭಾಷೆ, ರೂಪ, ಬಂಧ, ತಂತ್ರ, ಪದದ ಪದಾರ್ಥದ ಬಗ್ಗೆ ಬಂದಿರುವ ವಿಭಿನ್ನ ಅರ್ಥಗಳನ್ನು ಕುರಿತು ಪರಂಪರಾಗತ ಸಾಹಿತ್ಯದ ಪುನರ್‌ಮೌಲ್ಯಮಾಪನ ಮಾಡುತ್ತಾರೆಯೆ ಹೊರತು ಸಾಹಿತ್ಯದಲ್ಲಿನ ಸಾಮಾಜಿಕ ಆಯಾಮಗಳ ಪನರ್‌ಮೌಲ್ಯಮಾಪನ ಮಾಡುವುದಿಲ್ಲ. ಸಾಹಿತ್ಯಿಕ ಆಯಾಮಗಳನ್ನು ಕೇಂದ್ರೀಕರಿಸಿಕೊಂಡು ಪುನರ್‌ಮೌಲ್ಯಮಾಪನ ಮಾಡುತ್ತಾರೆ.

### ೩.೧.೪ ಪ್ರಾಯೋಗಿಕ ವಿಮರ್ಶೆ

ಇಂಗ್ಲಿಷ್‌ನ 'ಪ್ರಾಕ್ಟಿಕಲ್ ಕ್ರಿಟಿಸಿಸಂ'ನ ಕನ್ನಡ ರೂಪ 'ಪ್ರಾಯೋಗಿಕ ವಿಮರ್ಶೆ.' ಐ.ಎ.ರಿಚರ್ಡ್ಸ್ ಈ ವಿಮರ್ಶಾ ವಿಧಾನವನ್ನು ನವ್ಯ ಸಂದರ್ಭದಲ್ಲಿ ಪ್ರಾರಂಭಿಸಿದನು. ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಗಮನಿಸಿದಾಗ ನವೋದಯ ಕಾಲಘಟ್ಟದಲ್ಲೂ ಪ್ರಾಯೋಗಿಕ ವಿಮರ್ಶೆ ಬಳಕೆಯಾಗಿದೆ. ಟಿ.ಎಸ್.ವೆಂಕಣ್ಣಯ್ಯನವರ 'ಪಂಪನ ಎರಡು ಪದ್ಯಗಳು' ಲೇಖನ, ಕುವೆಂಪು ಅವರ 'ಸರೋವರದ ಸಿರಿಗನ್ನಡಿಯಲ್ಲಿ' ಲೇಖನ, ತೀ.ನಂ.ಶ್ರೀ ಅವರ 'ಕೆರೆಗೆಹಾರ' ಮುಂತಾದ ಬರಹಗಳನ್ನು ಈ ದೃಷ್ಟಿಯಿಂದ ಗುರುತಿಸಬಹುದು. ಇಂಗ್ಲಿಷಿನ 'ಪ್ರಾಕ್ಟಿಕಲ್ ಕ್ರಿಟಿಸಿಸಂ'ನ ಮಾದರಿಯಾಗಿ ಅಂದರೆ ವಿದ್ಯಾರ್ಥಿಗಳಿಗೆ, ರೈತರಿಗೆ, ಕಾರ್ಮಿಕರಿಗೆ ಪದ್ಯಗಳ ಬಿಡಿ ಭಾಗಗಳನ್ನು ಕೊಟ್ಟು ಟಿಪ್ಪಣಿ ಪಡೆದ ಹಾಗೆ ಕನ್ನಡದಲ್ಲಿ ಈ ಕ್ರಮ ಜರುಗಲಿಲ್ಲ. ಪಾಶ್ಚಾತ್ಯ ಪ್ರಾಯೋಗಿಕ ವಿಮರ್ಶೆಯಲ್ಲಿ ರೂಪುಗೊಂಡಂಥ ಕಾವ್ಯ ಕುಸುರಿಯ ಭಾಗವಾಗಿದ್ದ ಪ್ರತಿಮೆ, ಭಾಷೆ, ಪದಬಳಕೆಯ ವಿನ್ಯಾಸ– ಈ ನೆಲೆಗಳ ಹಿನ್ನಲೆಯಲ್ಲಿ ಹಳೆಗನ್ನಡ ಕಾವ್ಯದ ಪದ್ಯಗಳನ್ನು ಪ್ರಾಯೋಗಿಕ ವಿಮರ್ಶೆಗೆ ಒಳಪಡಿಸಿದ್ದಾರೆ. ನವೋದಯದ ನಂತರದಲ್ಲಿ ನವ್ಯ ವಿಮರ್ಶಕರು ಪ್ರಾಯೋಗಿಕ ವಿಮರ್ಶೆಯನ್ನು ಕಾವ್ಯ, ಕಾದಂಬರಿ, ಸಣ್ಣಕತೆ, ನಾಟಕ ಈ ಪ್ರಕಾರಗಳಲ್ಲೆಲ್ಲ ಅನ್ವಯಿಸಲು ಪ್ರಯತ್ನಿಸಿದರು.

ಒಂದು ನಿರ್ದಿಷ್ಟ ಸಾಹಿತ್ಯ ಕೃತಿಯನ್ನು, ಕೃತಿಭಾಗವನ್ನು, ಸಾಹಿತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ವಿಮರ್ಶೆಯನ್ನು ಮಾಡುವುದೇ ಪ್ರಾಯೋಗಿಕ ವಿಮರ್ಶೆ. ಈ ರೀತಿಯ ಪ್ರಾಯೋಗಿಕ ವಿಮರ್ಶೆ ಭಾರತೀಯ ಅಲಂಕಾರದಲ್ಲಿ ಕಾವ್ಯಮೀಮಾಂಸೆಯ ಅಂಗವಾಗಿ ಬೆಳೆದು ಬಂದಿರುವುದನ್ನು ಗಮನಿಸಬಹುದು. ಕೆಲವು ಕೃತಿಗಳಿಗೆ ಟೀಕು, ಟಿಪ್ಪಣಿ, ವ್ಯಾಖ್ಯಾನ, ಭಾಷ್ಯಗಳ ರೂಪದಲ್ಲಿ 'ಪ್ರಾಯೋಗಿಕ ವಿಮರ್ಶೆ' ಬೆಳೆದಿದೆ ಎಂಬುದನ್ನು ಸಹ ಗ್ರಹಿಸಬಹುದು. ಇಂತಹ ಪ್ರಾಯೋಗಿಕ ವಿಮರ್ಶೆಯನ್ನು ಕುರಿತು "ಕೃತಿಯ ಬಂಧವನ್ನು ಅದರ ಅವಯವಗಳಾಗಿ ವಿಶ್ಲೇಷಿಸುವುದು, ಅವುಗಳ ಪ್ರತ್ಯೇಕ ಅರ್ಥ; ಕೃತಿಯ ಸಂಕೀರ್ಣ ಬಂಧದಲ್ಲಿ ಅವು ಪಡೆಯುವ ಅರ್ಥ; ಕೃತಿಯ ಒಟ್ಟು ನಿಲುವನ್ನು ಕಟ್ಟುವುದರಲ್ಲಿ ಅವುಗಳ ಪಾತ್ರ; ತಮ್ಮ ಎಲ್ಲ ಸಾಧ್ಯತೆಗಳಲ್ಲಿ ಆ ನಿಲುವನ್ನು ಧ್ವನಿಸುವ, ಅಭಿನಯಿಸುವ ರೀತಿ; ಈ ಕೆಲಸದಲ್ಲಿ ಅವು ಎಷ್ಟು ಗೆದ್ದಿವೆ, ಎಲ್ಲಿ ಸೋತಿವೆ ಎನ್ನುವುದರ ವಿವೇಚನೆ ಇವೆಲ್ಲ ಪ್ರಾಯೋಗಿಕ ವಿಮರ್ಶೆಯ ಗಡಿಯಲ್ಲಿ ಬರುವ ವಿಷಯಗಳು.[೧]" ಹೀಗೆ ಜಿ.ಎಸ್.ಶಿವರುದ್ರಪ್ಪ ಅವರು ಪ್ರಾಯೋಗಿಕ ವಿಮರ್ಶೆಯ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಹೀಗೆ ಕೃತಿಯೊಂದರ ಪದಾರ್ಥದ ಸಂಘಟನೆ, ಶಬ್ದವಿನ್ಯಾಸ, ಸಂಕೇತಗಳು ಸಾಂಕೇತಿಕ ಕ್ರಿಯೆಗಳು, ಭಾಷೆ ಇವುಗಳ ನೆಲೆಯಲ್ಲಿ ಕೃತಿಯ ಯಶಸ್ವಿಯನ್ನು ಮೌಲ್ಯೀಕರಿಸುವುದೇ ಪ್ರಾಯೋಗಿಕ ವಿಮರ್ಶೆಯ ಉದ್ದೇಶವಾಗಿದೆ.

ನವ್ಯ ಸಾಹಿತ್ಯ ವಿಮರ್ಶೆಯ ಸಂದರ್ಭದಲ್ಲಿ ಅನೇಕ ಪ್ರಾಯೋಗಿಕ ವಿಮರ್ಶಕರನ್ನು ಕಾಣಬಹುದು. ಎಂ.ಜಿ. ಕೃಷ್ಣಮೂರ್ತಿ, ಜಿ.ಎಚ್. ನಾಯಕ, ಸುಮತೀಂದ್ರ ನಾಡಿಗ, ಎಚ್.ಎಸ್.ರಾಘವೇಂದ್ರ ರಾವ್. ಕೆ.ಎಸ್.ನಿಸಾರ್ ಅಹಮದ್ ಮುಂತಾದವರು ಪ್ರಾಯೋಗಿಕ ವಿಮರ್ಶೆಯನ್ನು ನವ್ಯ ಸಂದರ್ಭದಲ್ಲಿ ಮಾಡುತ್ತಾರೆ.

ಪ್ರಾಯೋಗಿಕ ವಿಮರ್ಶೆಯ ಒಂದು ಪರಂಪರೆಯನ್ನು ಕನ್ನಡದಲ್ಲಿ ಕಟ್ಟಿಕೊಟ್ಟ ಯಶಸ್ಸು ನವೋದಯ ಮತ್ತು ನವ್ಯ ಸಾಹಿತ್ಯ ಪಂಥಕ್ಕೆ ಸಲ್ಲುತ್ತದೆ. ಅದರಲ್ಲೂ ನವ್ಯ ಸಾಹಿತ್ಯ ಪಂಥವು ಇದನ್ನು ಅತಿಯಾಗಿ ಬಳಸಿತು. ಇದರ ಪ್ರಭಾವದಿಂದಾಗಿ ಮತ್ತು ಅಡಿಗರ ಕಾವ್ಯಪ್ರೇಮದಿಂದಾಗಿಯೇ ಜಿ.ಎಚ್.ನಾಯಕರಿಗೂ ಪ್ರಾಯೋಗಿಕ ವಿಮರ್ಶೆಯ ಬಗೆಗೆ ಒಲವು ಉಂಟಾಗಿರಬಹುದು. ಜಿ.ಎಚ್. ನಾಯಕರು ಕೃತಿಯ ಒಂದು ಪದ್ಯವನ್ನು ಪ್ರಾಯೋಗಿಕ ವಿಮರ್ಶೆಗೆ ಒಳಪಡಿಸುತ್ತಾರೆ. ತಮ್ಮ ಸಮಕಾಲೀನ ವಿಮರ್ಶಕರಾದ ಎಂ.ಜಿ. ಕೃಷ್ಣಮೂರ್ತಿಯವರಂತೆ ಭಿನ್ನವಾದ ಆಲೋಚನಾಕ್ರಮ ಮತ್ತು ಅಭಿವ್ಯಕ್ತಿ ಕ್ರಮಗಳು ವಿಶೇಷತೆಯಿಂದ ಕೂಡಿವೆ. ಪ್ರಾಯೋಗಿಕ ವಿಮರ್ಶೆಗೆ ಒಳಪಡಿಸುವ ಸಂದರ್ಭದಲ್ಲಿ ಕೃತಿಯ ಆಯ್ಕೆ ಮಹತ್ವದ್ದಾಗಿರುತ್ತದೆ. ಇಲ್ಲಿ ನಾಯಕರು 'ಮೇಜರ್' ಕವಿಗಳ ಪದ್ಯಗಳನ್ನು ಮಾತ್ರ ವಿಮರ್ಶಿಸುತ್ತಾರೆ.

ಜಿ.ಎಚ್.ನಾಯಕರು ಅಡಿಗರ ಜನಪ್ರಿಯ ಭಾವಗೀತೆ 'ಮೋಹನಮುರಳಿ', ಜಿ.ಎಸ್.ಶಿವರುದ್ರಪ್ಪನವರ 'ಮಬ್ಬಿನಿಂದ ಮಬ್ಬಿಗೆ'(ನಿರಪೇಕ್ಷ) ಮತ್ತು ದ.ರಾ.ಬೇಂದ್ರೆಯವರ 'ನಾದಲೀಲೆ'(ಸ್ಥಿತಿಪ್ರಜ್ಞೆ) ಮುಂತಾದ ಕವನಗಳನ್ನು ಪ್ರಾಯೋಗಿಕ ವಿಮರ್ಶೆಗೆ ಒಳಪಡಿಸಿದ್ದಾರೆ. 'ಪಂಪಭಾರತ', 'ಗದಾಯುದ್ಧ' ಮತ್ತು 'ಹರಿಶ್ಚಚಂದ್ರಕಾವ್ಯ'ಗಳಿಂದ ಬಿಡಿ ಬಿಡಿ ಪದ್ಯಗಳನ್ನು ಆಯ್ದುಕೊಂಡು ಪ್ರಾಯೋಗಿಕ ವಿಮರ್ಶೆ ಮಾಡಿದರೂ ಕೃತಿಗೆ ನ್ಯಾಯವನ್ನು ಸಲ್ಲಿಸುವ ದೃಷ್ಟಿಯಿಂದ ಸಮಗ್ರತೆಯನ್ನು ಕಾಯ್ದುಕೊಂಡು ವಿಮರ್ಶಿಸುವ ತಾತ್ವಿಕ ನೆಲೆಗಟ್ಟು ಗಮನೀಯವಾದದ್ದು.

ಅಡಿಗರ 'ಮೋಹನಮುರಳಿ'ಯಲ್ಲಿನ ಗೇಯತೆ, ಮೂರುನಾಲ್ಕು ಮಾತ್ರೆಗಳ ಛಂದೋಲಯಗಳ ಏರಿಳಿತ, ಪದಪ್ರಯೋಗ ಪ್ರಜ್ಞೆ, ಕವಿಯ ಪ್ರಾಮಾಣಿಕತೆ ಹಾಗೂ ಪ್ರತಿಭೆ, ತೀವ್ರವಾದ ಅನುಭವ ಮುಂತಾದವುಗಳನ್ನು ಪ್ರಾಯೋಗಿಕ ವಿಮರ್ಶೆಯ ವಿಧಾನದಲ್ಲಿ ವಿಮರ್ಶಿಸುತ್ತಾರೆ. ಜಿ.ಎಸ್. ಶಿವರುದ್ರಪ್ಪನವರ 'ಮಬ್ಬಿನಿಂದ ಮಬ್ಬಿಗೆ' ಕವನದಲ್ಲಿ ಪ್ರತಿಮೆ, ಸಂಕೇತ, ಬಳಸಿದ ಪದಗಳ ಮೇಲೆ ಸಾರ್ಥಕತೆಯ ಪ್ರಶ್ನೆ, ಧ್ವನಿ, ಅನುಭವ ಸಾಂದ್ರತೆ ಇತ್ಯಾದಿಗಳನ್ನೂ ನಾಯಕರು ಸೂಕ್ಷ್ಮವಾಗಿ ವಿವೇಚಿಸುತ್ತಾರೆ. ಬೇಂದ್ರೆಯವರ 'ನಾದಲೀಲೆ' ಕವನವನ್ನು ಕುರಿತು "ಈ ಕವನದಲ್ಲಿ ನಾದಗುಣದ ಸಮೃದ್ಧಿ ಇದೆ. ಕವನ ಪ್ರತಿಮಾ ವಿಧಾನದಲ್ಲಿ ಬೆಳೆದಿದೆ. ಚಿತ್ರವತ್ತಾದ ಸನ್ನಿವೇಶಗಳ ಸೃಷ್ಟಿ ಇದೆ. ಮೊದಲಿನಿಂದ ಕೊನೆಯವರೆಗೂ ಧ್ವನಿಶಕ್ತಿಯು ಪ್ರತಿಮೆಗಳ ಮೂಲಕ ಮಾತ್ರವಲ್ಲ, ಪದ ಪ್ರಯೋಗಗಳಲ್ಲಿಯೂ ಅನುರಣಿಸುತ್ತದೆ. ಕವನದಲ್ಲಿ ಅನುಭವವನ್ನು ಅರಿವಿನ ನೆಲೆಗೆ ವಿಸ್ತರಿಸಿ ತಾತ್ವಿಕ ನಿಲುವನ್ನು ಪ್ರತಿಪಾದಿಸುವ ಅಥವಾ ತಾತ್ವಿಕ ತಿಳುವಳಿಕೆಯನ್ನು ಹಾಯಿಸುವ ಉತ್ಸಾಹ, ಉದ್ದೇಶ ಇದೆ. ಕವನದಲ್ಲಿ ಒಂದು ನಾಟಕೀಯ ಸನ್ನಿವೇಶದ ಸೃಷ್ಟಿಯೂ ಆಗಿದೆ. ಬೇಂದ್ರೆಯವರ ಬಹಳಷ್ಟು ಕವನಗಳಲ್ಲಿ ಭಾವಗೀತೆಯ ಸ್ವರೂಪ ಲಕ್ಷಣಗಳಲ್ಲಿ ಮುಖ್ಯವಾದ ಆತ್ಮನಿಷ್ಠ ಅಥವಾ ಸ್ವ ನಿಷ್ಠದನಿ ಇರುವುದಿಲ್ಲ. ಅಂಥ ಕವನಗಳ ಸಾಲಿಗೆ ಈ ಕವನವು ಸೇರುತ್ತದೆ. ಆದರೆ ಒಟ್ಟಿನಲ್ಲಿ ಇದು ಬೇಂದ್ರೆಯವರ ಕಾವ್ಯದ ಅನೇಕ ಗುಣಲಕ್ಷಣಗಳನ್ನು, ಶಕ್ತಿ-ಪರಿಮಿತಿಗಳನ್ನು ಪ್ರತಿನಿಧಿಸುವ ಒಂದು ಪ್ರಾತಿನಿಧಿಕ ಕವನ.೯" ಎಂಬಮಾತುಗಳಲ್ಲಿ ಒಂದು ಮೌಲ್ಯನಿರ್ಣಯವಿದೆ. ಈ ಕವನವನ್ನು ಪ್ರಾಯೋಗಿಕ ವಿಮರ್ಶೆಗೆ ಒಳಪಡಿಸಿದ ಬಳಿಕ ಹುಟ್ಟಿದೆ. ಈ ವಿಮರ್ಶಾ ಮಾದರಿಯಲ್ಲೂ ಕೃತಿಯೊಂದನ್ನು ಶಬ್ದವಿನ್ಯಾಸಗಳಲ್ಲಿ ಹಿಡಿದಿಡುವ ನುಣುಪುಗಾರಿಕೆ ಇದೆ ಎಂಬುದನ್ನು ಗ್ರಹಿಸಬಹುದು. ನಾಯಕರು ಪ್ರಾಯೋಗಿಕ ವಿಮರ್ಶೆಯಲ್ಲಿ ಪದ್ಯವೊಂದಕ್ಕೆ ಪದ, ಪದಾರ್ಥ, ಧ್ವನಿ, ಪ್ರತಿಮೆ, ಸಂಕೇತ, ಶೈಲಿ, ಭಾಷೆ, ಅನುಭವಸಾಂದ್ರತೆ ಇತ್ಯಾದಿಗಳ ಮೂಲಕ ವಿಮರ್ಶೆಗೆ ಒಳಪಡಿಸುತ್ತಾರೆ. ಪದ್ಯದ ಬಗೆಗಿನ ಮೌಲ್ಯಮಾಪನ ನಿಲುವು ಮತ್ತು ಪದ್ಯದ ಮಹತ್ವದ ಬಗೆಗೂ ವಿಮರ್ಶಿಸುತ್ತಾರೆ.

## ೩.೨ ಚಾರಿತ್ರಿಕ ವಿಮರ್ಶೆ

ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಕುರ್ತಕೋಟಿಯವರ ನಂತರ ಸಾಹಿತ್ಯ ಪ್ರಕಾರಗಳಾದ ಕಾವ್ಯ, ಸಣ್ಣಕತೆಗಳ ಬಗೆಗೆ ಐತಿಹಾಸಿಕ ಕಲ್ಪನೆಯನ್ನಿಟ್ಟುಕೊಂಡು ಬರೆದವರು ಜಿ.ಎಚ್. ನಾಯಕರು ಇವರ ಅಧ್ಯಯನಾಸಕ್ತಿ ವ್ಯಾಪಕವಾದದ್ದು. ಪ್ರಾಚೀನ ಸಾಹಿತ್ಯ ಮತ್ತು ಆಧುನಿಕ ಸಾಹಿತ್ಯ ಯಾವುದೇ ಆಗಿರಲಿ ಅದರ ಸಂಕೀರ್ಣಸ್ವರೂಪ, ರಚನೆಯ ಸಂದರ್ಭ, ಸನ್ನಿವೇಶಗಳ ಪರಿಶೀಲನೆ, ಸಮಾನ ಮಟ್ಟದ ಕೃತಿಗಳೊಂದಿಗೆ ಹೋಲಿಕೆ ಮುಂತಾದ ಆಂಶಗಳನ್ನು ಅರಿತು ವಿಮರ್ಶಾ ಓದಿನ ದಿಕ್ಕುಗಳನ್ನು ಅವರು ಅನುಭವಕ್ಕೆ ತಂದುಕೊಳ್ಳುತ್ತಾರೆ. ನಾಯಕರು ತಮಗೆ ಮೆಚ್ಚಿಕೆಯಾದ ಒಂದು ಕೃತಿಯನ್ನು ಒಂದು ಪ್ರತ್ಯೇಕ ಘಟಕವೆಂದು ತಿಳಿಯದೆ, ಒಟ್ಟು ಪರಂಪರೆ–ಚಳುವಳಿ–ಸಂದರ್ಭಗಳ ಐತಿಹಾಸಿಕ ಸನ್ನಿವೇಶದಲ್ಲಿ ಆ ಕೃತಿಯನ್ನಿಟ್ಟು ವಿಶ್ಲೇಷಣೆ ಮಾಡುತ್ತಾರೆ.

ಚಾರಿತ್ರಿಕ ವಿಮರ್ಶೆಯನ್ನು ಕುರಿತು ಜಿ.ಎಸ್.ಶಿವರುದ್ರಪ್ಪ ಅವರು "ಈ ಐತಿಹಾಸಿಕ ವಿವೇಚನೆ ಸಾಹಿತ್ಯ ವಿಮರ್ಶೆಯಲ್ಲಿ ಕೃತಿಯ ಬೆಲೆಯನ್ನು ನಿರ್ಣಯಿಸಲು ವಿಮರ್ಶಕನು ಬಳಸುವ ಒಂದು ಉಪಕರಣ ಮಾತ್ರ[೧೦]" ಎಂದು ಹೇಳುತ್ತಾರೆ. ಈ ಮಾತು ಜಿ.ಎಚ್. ನಾಯಕರ ವಿಮರ್ಶೆ ಯನ್ನು ಪ್ರವೇಶ ಮಾಡಿನೋಡಿದಾಗ ಸತ್ಯವೆನಿಸುತ್ತದೆ. ನಾಯಕರು ಕವಿ, ಕಾವ್ಯ, ಪ್ರಕಾರ, ಪಂಥ ಗಳಲ್ಲಿ ಸೃಜನಶೀಲತೆ, ವಸ್ತು, ಭಾಷೆ, ಅನುಭವ, ಅಭಿವ್ಯಕ್ತಿಗಳನ್ನು ಗುರುತಿಸುವಾಗ ಪರಂಪರೆಯ ಅಥವಾ ಚಾರಿತ್ರಿಕ ಪ್ರಜ್ಞೆ ಅವಶ್ಯಕವೆಂದು ಅರಿತೇ ವಿಮರ್ಶಿಸುತ್ತಾರೆ. ಈ ದೃಷ್ಟಿಯಿಂದಲೇ ಜಿ.ಎಚ್.ನಾಯಕರು 'ಪ್ರಾಚೀನ ಮತ್ತು ಆಧುನಿಕ ಕನ್ನಡ ಸಾಹಿತ್ಯ; ಒಂದು ನೋಟ' ಲೇಖನದಲ್ಲಿ ಚಾರಿತ್ರಿಕವಾದ ಚರ್ಚೆಯನ್ನು ಕೈಗೊಳ್ಳುತ್ತಾರೆ.

ಜಿ.ಎಚ್. ನಾಯಕರು 'ಚಾರಿತ್ರಿಕ ವಿಮರ್ಶೆ'ಯನ್ನು ಎಲ್ಲಿ ಮತ್ತು ಹೇಗೆ ಮಾಡಿದ್ದಾರೆಂದು ತೋರಿಸುವುದು ಕಷ್ಟಸಾಧ್ಯ; ಆದರೆ 'ಸಂಪ್ರದಾಯ ಮತ್ತು ವ್ಯಕ್ತಿ ಪ್ರತಿಭೆ'ಯನ್ನು ಕುರಿತು ಟಿ.ಎಸ್.ಎಲಿಯಟ್ ವಿವೇಚಿಸುವ 'ಐತಿಹಾಸಿಕ ಪ್ರಜ್ಞೆ' (Historical Sence) ಎನ್ನುವ ಹೊಸ ವಿಚಾರವನ್ನು ಜಿ.ಎಚ್.ನಾಯಕರು ಅನುಸರಿಸಿರಬಹುದು ಎನಿಸುತ್ತದೆ. ನಾಯಕರು ಈ 'ಐತಿಹಾಸಿಕ ಪ್ರಜ್ಞೆ' ಯೊಂದಿಗೆ ಸಾಹಿತ್ಯ ವಿಮರ್ಶೆ ಮಾಡಿರುವುದನ್ನು ಸೂಚಿಸಬಹುದು. ಈ ಸೂಚನೆಗೆ ಮೊದಲು ಚಾರಿತ್ರಿಕ ವಿಮರ್ಶೆಯ ಲಕ್ಷಣಗಳನ್ನು ಗಮನಿಸುವ ಅಗತ್ಯವಿದೆ. ಈ ಚಾರಿತ್ರಿಕ ಅಂಶಗಳನ್ನು ಸಿ.ಎನ್. ರಾಮಚಂದ್ರನ್ ಚಾರಿತ್ರಿಕ ವಿಮರ್ಶೆಯ ಲಕ್ಷಣ/ಕಾಳಜಿಗಳನ್ನಾಗಿ ಗುರುತಿಸುತ್ತಾರೆ. ಮತ್ತು ಈ ಲಕ್ಷಣಗಳು ವಿಮರ್ಶಕನಿಂದ ವಿಮರ್ಶಕನಿಗೆ ಬದಲಾಗುತ್ತ ಹೋಗುತ್ತವೆ ಎನ್ನುತ್ತಾರೆ. ರಾಮಚಂದ್ರನ್ ಅವರು "೧)ಲೇಖಕನೊಬ್ಬನ ಸಮಕಾಲೀನ ಸಾಹಿತ್ಯಿಕ ಮತ್ತು

ಸಾಂಸ್ಕೃತಿಕ ಸನ್ನಿವೇಶವನ್ನು ಅಪಾರ ಪಾಂಡಿತ್ಯ ಹಾಗೂ ಶ್ರಮದ ಮೂಲಕ ಪುನರ್‌ವಿಮರ್ಶಿಸುವುದು; ೨)ಕೃತಿ ನಿರ್ಮಾಣ ಕಾಲದಲ್ಲಿ ಪ್ರಭಾವಶಾಲಿಯಾಗಿದ್ದ ವೈಚಾರಿಕತೆಯನ್ನು ಗುರುತಿಸುವುದು. ೩) ಒಂದು ಕೃತಿಯ ಸಾಹಿತ್ಯಿಕ ಆಕರಗಳು ಮತ್ತು ಒಂದು ಕೃತಿಯ ಮೇಲೆ ಪ್ರಭಾವ ಬೀರಿರಬಹುದಾದ ಇತರ ಕೃತಿಗಳು- ಇವನ್ನು ಸಂಶೋಧಿಸುವುದು. ೪) ಪ್ರಾಚೀನ ಕಾಲದ ಕೃತಿಯ ಪಾಠಾಂತರಗಳನ್ನು ಪರಿಶೀಲಿಸಿ ಯೋಗ್ಯ ಪಠ್ಯವನ್ನು ಸಿದ್ದಪಡಿಸುವುದು. ೫) ಒಂದು ಕೃತಿಯ ಕಾಲ ನಿರ್ದೇಶನ ಮಾಡುವುದು. ೬) ಕೃತಿ ಕಾರನ ವೈಚಾರಿಕ ಮೌಲ್ಯಗಳನ್ನು ಗುರುತಿಸುವುದು. ೭) ಕೃತಿಕಾರನ ಜೀವನ ಚರಿತ್ರೆಯನ್ನು ಸಿದ್ದಪಡಿಸುವುದು-ಇವೆಲ್ಲವೂ ಚಾರಿತ್ರಿಕ ವಿಮರ್ಶೆಯ ವ್ಯಾಪ್ತಿಯೊಳಗೆ ಬರುತ್ತವೆ.[೧೧]" ಈ ಅಂಶಗಳಲ್ಲಿ ಮೊದಲ ಮೂರು ಅಂಶಗಳು ಸ್ವಲ್ಪಮಟ್ಟಿಗೆ ನಾಯಕರ ವಿಮರ್ಶೆಯಲ್ಲೂ ಕೊಂಚ ಕೊಂಚವಾಗಿ ಕಾಣಬರುತ್ತವೆ. ಆದರೆ ನಾಯಕರಲ್ಲಿ ಉಳಿದ ರೀತಿಯ ಚಾರಿತ್ರಿಕ ವಿಮರ್ಶೆಯು ಬಹುತೇಕವಾಗಿ ಕಾಣಬರುವುದಿಲ್ಲ. ನಾಯಕರಲ್ಲಿ ಚಾರಿತ್ರಿಕ ವಿಮರ್ಶೆಯ ಸ್ವರೂಪವು ಕೃತಿಯೊಂದರ ಮೇಲೆ ಬಂದಿರುವ ಚಾರಿತ್ರಿಕ ಅಥವಾ ಪರಂಪರಾಗತ ವಿಮರ್ಶೆಯನ್ನು ಪುನರ್‌ಮೌಲ್ಯಮಾಪನ ಮಾಡುವುದು.

ವಸ್ತು-ಅನುಭವ ಅಭಿವ್ಯಕ್ತಿ ಸೃಜನಶೀಲತೆಯು ಚಾರಿತ್ರಿಕವಾಗಿ ಹೇಗೆ ಅವಸ್ಥಾಂತರಗೊಂಡು ಬಂದಿದೆ ಎಂಬುದನ್ನು ಗುರುತಿಸುವುದು ನಾಯಕರಲ್ಲಿ ಮುಖ್ಯವಾಗಿ ಕಾಣುತ್ತದೆ. ಸಾಹಿತ್ಯ ಕಥಾ ತಂತ್ರ, ಶಿಲ್ಪವಿನ್ಯಾಸ, ಅನುಭವ ವಿವಕ್ಷೆಯಲ್ಲಿ ಸಾಹಿತ್ಯ ಪಂಥಗಳಲ್ಲಿ ಹೇಗೆ ವಿಭಿನ್ನವಾಗಿ ಬಳಸಿಕೊಂಡು ಬಂದಿತೆಂಬುದನ್ನು ಚಾರಿತ್ರಿಕವಾಗಿ ಗುರುತಿಸುವ ಪ್ರಯತ್ನವನ್ನು ಅವರು ಮಾಡುತ್ತಾರೆ. ಇವು ನಾಯಕರ ಚಾರಿತ್ರಿಕ ವಿಮರ್ಶೆಯ ಒಳಗೆ ಪ್ರವೇಶ ಮಾಡಿವೆ ಎಂಬುದನ್ನು ಗುರುತಿಸಬಹುದು.

'ಸಕಾಲಿಕ' ಸಂಕಲನದಲ್ಲಿನ 'ಆಧುನಿಕ ಕನ್ನಡ ಸಾಹಿತ್ಯ ಸಂದರ್ಭ ಮತ್ತು ಮುಸ್ಲಿಂ ಸಂವೇದನೆ' ಎಂಬ ಲೇಖನದಲ್ಲಿ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಸಂದರ್ಭದ ದೃಷ್ಟಿಕೋನ ದಿಂದ ಸಾಹಿತ್ಯವನ್ನು ಪರಿಶೀಲಿಸುವ ಬಗ್ಗೆ ಜಿ.ಎಚ್. ನಾಯಕರು ಹೇಳಿಕೊಳ್ಳುತ್ತಾರೆ; ಹೀಗೆ ಪರಿಶೀಲಿಸುವಾಗ ಚರಿತ್ರೆಯ ಅಂಶಗಳನ್ನು ಅವರು ನಾಲ್ಕು ಹಂತಗಳಲ್ಲಿ ವಿಭಜಿಸಿಕೊಳ್ಳುತ್ತಾರೆ.

೧. ಮಹಮದೀಯ ಆಗಮನಕ್ಕಿಂತ ಹಿಂದಿನ ಕಾಲಮಾನ.

೨. ಮಹಮದೀಯರ ಆಗಮನದ ಆ ನಂತರದ ಬ್ರಿಟಿಷ್ ವಸಾಹತುಶಾಹಿಯ ಅಧಿಕಾರ ಗ್ರಹಣದವರೆಗಿನ ಕಾಲಮಾನ.

೩. ಬ್ರಿಟಿಷ್ ವಸಾಹತುಶಾಹಿಯ ಆಡಳಿತದ ಕಾಲಾವಧಿಯಿಂದ ಸ್ವಾತಂತ್ರ್ಯಪ್ರಾಪ್ತಿ ಯವರೆಗಿನ ಕಾಲಮಾನ ಹಾಗೂ

೪. ಸ್ವಾತಂತ್ರ್ಯೋತ್ತರ ಕಾಲಮಾನ.

ಈ ನಾಲ್ಕು ಹಂತಗಳನ್ನು ವಿಶ್ಲೇಷಿಸುತ್ತಾ ಮತಧರ್ಮದ ಹಿನ್ನಲೆಯಲ್ಲಿ ಸೃಜನಶೀಲ ಸಾಹಿತ್ಯದತ್ತ ಮುಸ್ಲಿಮರು ಏಕೆ ಕನ್ನಡ ಸಾಹಿತ್ಯವನ್ನು ತಮ್ಮದಾಗಿಸಿಕೊಳ್ಳಲು ಸಾಧ್ಯವಾಗಲಿಲ್ಲ ಎಂಬುದರ ಬಗ್ಗೆ ಚಾರಿತ್ರಿಕ ಹಿನ್ನಲೆಯಲ್ಲಿ ನಾಯಕರು ವಿಶ್ಲೇಷಿಸುತ್ತಾರೆ.

"ಕನ್ನಡದಲ್ಲಿ ಜೈನರು ಸಾಹಿತ್ಯ ರಚಿಸಿದರು, ವೀರಶೈವರು ಸಾಹಿತ್ಯ ರಚಿಸಿದರು, ವೈದಿಕರು ತಡವಾಗಿಯಾದರೂ ಧಾರ್ಮಿಕ ಸಾಹಿತ್ಯ ರಚಿಸಿದರು. ಕ್ರಿಶ್ಚಿಯನ್ನರೂ ಏಸು ಚರಿತ್ರೆಯನ್ನಾದರೂ ಕನ್ನಡದಲ್ಲಿ ಬರೆದರು, ಆದರೆ ಸುಮಾರು ೮೦೦ ವರ್ಷಗಳ ಕಾಲದವರೆಗೆ ಮಹಮದೀಯರು ಕನ್ನಡ ನಾಡಿನಲ್ಲಿದ್ದರೂ ಕನ್ನಡವನ್ನು ತಮ್ಮ ಸೃಜನಶೀಲ ಅಭಿವ್ಯಕ್ತಿಗೆ ಏಕೆ ಬಳಸಿಕೊಳ್ಳಲಿಲ್ಲ? ಅವರಲ್ಲಿ ಅಂಥ ಪ್ರೇರಣೆ ಏಕೆ ಉಂಟಾಗಲಿಲ್ಲ?[೨೨]" ಎಂಬ ಪ್ರಶ್ನೆಯನ್ನು ನಾಯಕರು ಎತ್ತುತ್ತಾರೆ. ಇದಕ್ಕಾಗಿ ರಂಜಾನ್‌ದರ್ಗಾ, ಸನದಿ, ಅಕಬರ್‌ಆಲಿ, ನಿಸಾರ್ ಅಹಮದ್ ಮುಂತಾದ ಕವಿಗಳನ್ನು ಹೆಸರಿಸುತ್ತಾರೆ. ಇಂತಹ ಕೆಲ ಬರಹಗಾರರನ್ನು ಬಿಟ್ಟರೆ ಮತ್ತ್ಯಾವ ಮಹತ್ವದ ಲೇಖಕರು ಈ ಶತಮಾನದುದ್ದಕ್ಕೂ ಕಾಣುವುದಿಲ್ಲ. ಈ ಮಾತನ್ನು ಶಿಶುನಾಳ ಷರೀಫರನ್ನು ಹೊರತುಪಡಿಸಿ ಅವರು ಹೇಳುತ್ತಾರೆ. ಹೀಗೆ ಮತಧರ್ಮದ ಹಿನ್ನಲೆಯಲ್ಲಿ ಭಾಷೆ, ಸಾಹಿತ್ಯ ಸಂದರ್ಭ, ಸಂಸ್ಕೃತಿ ಸಂದರ್ಭ, ಎದುರಿಸುತ್ತಿರುವ ಬಿಕ್ಕಟ್ಟನ್ನು ಚಾರಿತ್ರಿಕ ನೆಲೆಯೊಳಗೆ ಅವರು ವಿಶ್ಲೇಷಿಸುತ್ತಾರೆ.

'ನಿರಪೇಕ್ಷ'ದಲ್ಲಿನ 'ಪ್ರಾಚೀನ ಮತ್ತು ಆಧುನಿಕ ಕನ್ನಡ ಸಾಹಿತ್ಯ; ಒಂದು ನೋಟ' ಎಂಬುದು ನಾಯಕರು ಒಂದು ಇತಿಹಾಸ ಪ್ರಬಂಧವಾಗಿದೆ. ಇಲ್ಲಿ ಚಾರಿತ್ರಿಕ ದೃಷ್ಟಿಕೋನ ಮತ್ತು ಪರಂಪರೆಯ ತಾತ್ವಿಕ ಅರಿವಿನೊಂದಿಗೆ ಜಿ.ಎಚ್. ನಾಯಕರು ಪ್ರಾಚೀನ ಮತ್ತು ಆಧುನಿಕ ಸಾಹಿತ್ಯ ಪಂಥಗಳನ್ನು ಅವಲೋಕಿಸುತ್ತಾರೆ. ರಂ.ಶ್ರೀ ಮುಗಳಿಯವರು ನಿರೂಪಣೆ ಮಾಡಿದ 'ಕನ್ನಡ ಸಾಹಿತ್ಯ ಚರಿತ್ರೆ'ಯ ರೀತಿ ಧೋರಣೆಗೆ ವಿಭಿನ್ನವಾಗಿ ಸಾವಿರ ವರ್ಷದ ಸಾಹಿತ್ಯ ಪ್ರವೃತ್ತಿ, ಸಾಂಪ್ರದಾಯಿಕದ ಗುಣದೋಷಗಳನ್ನು ಮತ್ತು ಸಾಹಿತ್ಯದ ಗತಿ-ವಿನ್ಯಾಸದ ತಿರುವುಗಳ ವಿಶ್ಲೇಷಣೆಯನ್ನು ನಾಯಕರು ಚಾರಿತ್ರಿಕ ನೆಲೆಯಲ್ಲಿ ಕೈಗೊಳ್ಳುತ್ತಾರೆ. ಇಷ್ಟೆ ಅಲ್ಲದೆ 'ಕನ್ನಡದಲ್ಲಿ ನವ್ಯಕಾವ್ಯ; ಪರಿಚಯಾತ್ಮಕ ಸಮೀಕ್ಷೆ' 'ಕನ್ನಡ ಸಣ್ಣಕತೆ; ಒಲವು ನಿಲುವುಗಳು' ಮತ್ತು 'ಹೊಸಗನ್ನಡ ಕವಿತೆ; ಪ್ರಸ್ತಾವನೆ' ಈ ಲೇಖನಗಳಲ್ಲೂ ಸಹ ಸಮೀಕ್ಷೆಯ ಜೊತೆಗೆ ಪ್ರಕಾರದ ಹುಟ್ಟು ವಿಕಾಸದ ಗಮನಾರ್ಹ ಲಕ್ಷಣಗಳನ್ನು, ಕಲೆಯಲ್ಲಿ ಉಂಟಾದ ಏರಿಳಿತಗಳನ್ನು ನಾಯಕರು ಗುರುತಿಸುವಾಗಲೂ ಚಾರಿತ್ರಿಕಪ್ರಜ್ಞೆಯ ನೆಲೆಗಳಿಂದಲೇ ಗಮನಿಸುತ್ತಾರೆ.

ಕೇಶವಶರ್ಮ.ಕೆ. ಅವರು ಜಿ.ಎಚ್. ನಾಯಕರ ವಿಮರ್ಶೆ ಬಗ್ಗೆ ಬರೆಯುತ್ತಾ "ಸಾಹಿತ್ಯ ಸಂರಚನೆಯನ್ನು ಒಳಗೊಳ್ಳುವ ವಸ್ತುವನ್ನು ಅದರ ಪಾಡಿಗೆ ಪರಿವೀಕ್ಷಿಸುವ ಜಿ.ಎಚ್.ನಾಯಕರು ಸಾಮಾಜಿಕ ತಲ್ಲಣವೊಂದನ್ನು ಗುರುತಿಸಲು ಇಷ್ಟಪಡುವುದಿಲ್ಲ. ಜಿ.ಎಚ್. ನಾಯಕರು ಆಕಸ್ಮಿಕವಾಗಿ ಚರಿತ್ರೆಯ ಬಗ್ಗೆ ಮಾತನಾಡಿದರು. ಅವರು ಗುರುತಿಸುವ ಚರಿತ್ರೆಗೆ ಧರಿಸುವ ಶಕ್ತಿಯೆ ಇಲ್ಲ. ನಾಯಕರಿಗೆ ಚರಿತ್ರೆ ಎಂದರೆ ಒಂದು ಕಿಟಕಿಯಿಂದ ನೋಡುವ ವೀಕ್ಷಣೆ ಮಾತ್ರ, ಜಿ.ಎಚ್.ನಾಯಕರು ಸಾಹಿತ್ಯ ಕೃತಿಯೊಂದು ಕಟ್ಟಿಕೊಳ್ಳುವ ವಸ್ತುಗಳಿಗೆ ನಿಷ್ಠರಾಗಿದ್ದಾರೆ ಹೊರತು, ಉಳಿದ ಚಾರಿತ್ರಿಕ ವಿವರಗಳಿಗೆ ಹೆಚ್ಚು ನಿಷ್ಠರಾಗಿಲ್ಲ........ ನಾಯಕರು ಹುಡುಕುವ ಸತ್ಯವು ವ್ಯಕ್ತಿಗತ ಗ್ರಹಿಕೆಯ ಫಲವಾಗಿದೆ ಹೊರತು ಚರಿತ್ರೆಯ ಗ್ರಹಿಕೆಯ ಫಲವಲ್ಲ. ಕ್ರಿಕೆಟ್ ಕಾಮೆಂಟರಿ ರೀತಿಯಲ್ಲಿ ಅದು ಸಾಗುತ್ತದೆ[೭೩]" ಎಂದು ಹೇಳುತ್ತಾರೆ. ಕೇಶವಶರ್ಮರಲ್ಲಿ ನಾಯಕರ ವಿಮರ್ಶೆಯನ್ನು ವಿಮರ್ಶಿಸುವ ಒಂದು ತಾರ್ಕಿಕ ನೆಲೆಯಿದೆ. ಆದರೆ ರೋಗವೊಂದನ್ನು ಪತ್ತೆಹಚ್ಚಲು 'ಸೂಕ್ಷ್ಮದರ್ಶಕ' ಎಷ್ಟು ಮುಖ್ಯವೋ ನಾಯಕರು ಚರಿತ್ರೆಯನ್ನು 'ಕಿಟಕಿ'ಯಿಂದ ನೋಡುವುದು ಅಷ್ಟೇ ಮುಖ್ಯ. ಏಕೆಂದರೆ ಚರಿತ್ರೆಯ ಸೂಕ್ಷ್ಮಗಳನ್ನು ದಾಖಲಿಸಲು ತೆರೆದಕಣ್ಣಿಂದ ನೋಡಿದರೆ ಸಾಕು, ತೆರೆದ ಜಗತ್ತಿಗೆ ಪ್ರವೇಶ ಮಾಡಲೇಬೇಕೆಂಬ ಹಠಕ್ಕೆ ನಾಯಕರು ಬಿದ್ದವರಲ್ಲ, ಕೇಶವಶರ್ಮ ಗುರುತಿಸುವ 'ಕಿಟಕಿ', 'ಸೂಕ್ಷ್ಮದರ್ಶಕ'ದಂತೆಯೇ ಕಾಣುತ್ತದೆ. ನಾಯಕರ ವಿಮರ್ಶೆ 'ಕ್ರಿಕೆಟ್‌ಕಾಮೆಂಟರಿ' ರೀತಿಯ ಗ್ರಹಿಕೆಯದು ಎಂಬ ಶರ್ಮರ ಹೇಳಿಕೆಯಲ್ಲಿ ಕೊಂಚ ಸತ್ಯವಿದೆ. ಯಾಕೆಂದರೆ 'ಕ್ರಿಕೆಟ್‌ಕಾಮೆಂಟರಿ' ನಡೆದ ಸತ್ಯಗಳ ದಾಖಲೆಗಳ ವಿವರವಾಗಿದ್ದು, ಅದನ್ನೆ ನಾಯಕರು ಚರಿತ್ರೆಯ ಗ್ರಹಿಕೆಯ ಬಗೆಗೆ ಹೇಳಬಯಸುವುದು. ನಾಯಕರು 'ಚಾರಿತ್ರಿಕ ವಿಮರ್ಶೆ' ಮಾಡುವಾಗ ಹಠಕ್ಕೆ ಬೀಳುವವರಲ್ಲ. ಚರಿತ್ರೆಯ ಹಾದಿಯನ್ನು ಅವಲೋಕಿಸುವವರು ಎಂದು ಅನಿಸುತ್ತದೆ. ನಾಯಕರು ಚಾರಿತ್ರಿಕ ಪ್ರಜ್ಞೆಯ ಮೂಲಕ ಕನ್ನಡ ಸಾಹಿತ್ಯ ಪರಂಪರೆಯನ್ನು ಅವಲೋಕಿಸುತ್ತಾರೆ. ಈ ಚಾರಿತ್ರಿಕ ಪ್ರಜ್ಞೆಯೇ ಅವರನ್ನು ಚಾರಿತ್ರಿಕ ವಿಮರ್ಶಕರಾಗಿ ರೂಪಿಸಿದೆ. ಇದು ಪರಂಪರೆ ಪರಿಕಲ್ಪನೆಯ ನೆಲೆಯಲ್ಲಿ ಗಾಢವಾಗಿ ಇವರ ವಿಮರ್ಶೆಯಲ್ಲಿ ಕಾಣುತ್ತದೆ.

## ೨.೩ ಸಂಸ್ಕೃತಿ ನಿಷ್ಠ ವಿಮರ್ಶೆ

ಸಾಹಿತ್ಯವು ಸಂಸ್ಕೃತಿಯ ಒಂದು ಭಾಗ. ಕಲೆಗಾಗಿ ಕಲೆ, ಸಾಹಿತ್ಯಕ್ಕಾಗಿ ಸಾಹಿತ್ಯ ಎಂದು ನಂಬಿದವರು ಮಾತ್ರ ಒಂದು ಕೃತಿಯನ್ನು ಕೇವಲ ಸಾಹಿತ್ಯಿಕಾಂಶಗಳಿಗೆ ಮಹತ್ವ ನೀಡುತ್ತಾರೆ. ಕಲೆ ಅಥವಾ ಸಾಹಿತ್ಯವೆಂಬುದು ಬದುಕಿಗಾಗಿ ಎಂದು ತಿಳಿದುಕೊಂಡಾಗ ಸಂಸ್ಕೃತಿಯ ವ್ಯಾಖ್ಯಾನಗಳು ಬಹುಮುಖ್ಯವಾಗುತ್ತವೆ. ಆಗ ಒಂದು ಕೃತಿ ಸಾಹಿತ್ಯದ ಕಾರಣಗಳಿಗಾಗಿ ಮುಖ್ಯವಾಗಿರುವಂತೆ

ಸಾಹಿತ್ಯೇತರ ಆಯಾಮಗಳ ದೃಷ್ಟಿಯಿಂದಲೂ ಮುಖ್ಯವಾಗುತ್ತದೆ. ಇದನ್ನು ಸಂಸ್ಕೃತಿನಿಷ್ಠ ವಿಮರ್ಶೆ ಸಾಧ್ಯಮಾಡುತ್ತದೆ. ನಾಯಕರು ಮೊದಮೊದಲು ಕೃತಿನಿಷ್ಠತೆಯ ವಿಮರ್ಶೆ ಕಡೆ ಒಲವು ತೋರಿದರೂ ನಂತರದಲ್ಲಿ ಸಂಸ್ಕೃತಿನಿಷ್ಠ ಚಿಂತನೆಯಿಂದ ವಿಮರ್ಶೆಯ ಕಾರ್ಯವನ್ನು ಕೃತಿಯ ಒಳಗಿಂದಲೇ ಮಾಡತೊಡಗಿದರು. 'ನಿರಪೇಕ್ಷ' ಸಂಕಲನದಲ್ಲಿ 'ಮಾಸ್ತಿಯವರ ಕಾಕನಕೋಟೆ; ಒಂದು ಅಧ್ಯಯನ' ಲೇಖನವು ಒಂದು ಸಾಂಸ್ಕೃತಿಕ ಅಧ್ಯಯನದಂತೆಯೇ ಕಂಡು ಬರುತ್ತದೆ. 'ಸಕಾಲಿಕ' 'ಗುಣಗೌರವ' ಮತ್ತು 'ಸ್ಥಿತಿಪ್ರಜ್ಞೆ' ಇವು ನಾಯಕರು 'ಸಂಸ್ಕೃತಿ'ಯ ಬಗೆಗೆ ಚಿಂತಿಸಿದ ಮಹತ್ವ ಪೂರ್ಣ ಸಂಕಲನಗಳಾಗಿವೆ.



ಜಿ.ಎಚ್.ನಾಯಕರು ಕೃತಿಯ ಒಳವಿನ್ಯಾಸಗಳೊಂದಿಗೆ ಸಂಸ್ಕೃತಿಯ ಹುಡುಕಾಟವನ್ನು ನಡೆಸುತ್ತಾರೆ. "ಸಾಹಿತ್ಯ ಸಂಸ್ಕೃತಿ ಎನ್ನುವುದು ಕೃತಿ, ಪಠ್ಯ, ಲೇಖಕ, ಕೃತಿಯ ಉತ್ಪಾದನೆಯ ಪರಿಸರ, ಓದುಗ, ಆಶಯ, ಸೈದ್ಧಾಂತಿಕ ನೆಲೆಗಟ್ಟು, ಚಾರಿತ್ರಿಕ ಪರಿಸರ, ಇವೆಲ್ಲವನ್ನು ಒಳಗೊಂಡ ಸಂಕೀರ್ಣಶಕ್ತಿ, ಸಾಹಿತ್ಯಸಂಸ್ಕೃತಿಯು ಸಾಹಿತ್ಯವನ್ನು ನಿಯಂತ್ರಿಸಲು ತನ್ನ ಶಕ್ತಿಮೀರಿ ಪ್ರಯತ್ನಿಸುತ್ತದೆ. ಏಕೆಂದರೆ ಅದು ಯಾವುದನ್ನು ಸಾಹಿತ್ಯ ಎಂದು ಕರೆಯುತ್ತದೆಯೋ ಅದು ಮಾತ್ರ ಸಾಹಿತ್ಯ ವಾಗುತ್ತದೆ. ವ್ಯಾಖ್ಯೆಯೊಂದರ ಮೂಲಕ ಆಕೃತಿಯನ್ನು ನಿರ್ದಿಷ್ಟಗೊಳಿಸುವುದೇ ಸಾಹಿತ್ಯ ಸಂಸ್ಕೃತಿಯ ಮುಖ್ಯ ಕೆಲಸ. ಆದರೆ ಓದುಗರ ಅದೃಷ್ಟವಿರಬೇಕು; ಈ ಸಾಹಿತ್ಯ ಸಂಸ್ಕೃತಿಗಳ ಸರ್ವಾಧಿಕಾರತ್ವವನ್ನು ಮೀರಿ ಸಾಹಿತ್ಯದ ವ್ಯಾಖ್ಯೆ ಬದಲಾಗುತ್ತ ಬರುತ್ತದೆ.[೧೪]" ಎನ್ನುವ ಡಿ.ಆರ್.ನಾಗರಾಜ ಅವರ ಮಾತು ಸಾಹಿತ್ಯದಲ್ಲಿ 'ಸಂಸ್ಕೃತಿ' ಯ ವೈವಿಧ್ಯತೆ ಮತ್ತು ವೈರುಧ್ಯಗಳನ್ನು ಸೂಚಿಸುತ್ತದೆ. ನಾಯಕರು ಸೃಜನಶೀಲ ನೆಲೆಗಳನ್ನು ಬದುಕಿನ ಮತ್ತು ಜೀವನಾನುಭವದ ಸಂಲಗ್ನತೆಯನ್ನು ಹೊಸದಾಗಿ ಏನನ್ನೂ ಸೃಷ್ಟಿಸುವುದಿಲ್ಲ; ಆದರೆ ಕೃತಿಯೊಳಗಡೆ ಇವೆಲ್ಲವನ್ನು ತಾತ್ವಿಕವಾಗಿ ಪರಂಪರೆಯ ಹಾಗೂ ಸಾಂಸ್ಕೃತಿಕ ಸಾತತ್ಯದಲ್ಲಿ ಗೋಚರಿಸುವಂತೆ ಹೊಸ ಬೆಸುಗೆಯನ್ನು ಅವರು ಬೆಸೆಯುತ್ತಾರೆ.

ಜಿ.ಎಚ್. ನಾಯಕರು ಸಾಹಿತ್ಯ ವಿಮರ್ಶೆಯಲ್ಲಿ ಸಾಂಸ್ಕೃತಿಕ ಪರಂಪರೆಯ ಪ್ರಜ್ಞಾಪೂರ್ಣ ಗ್ರಹಿಕೆಯುಳ್ಳ ಸಂಸ್ಕೃತಿ ವಿಮರ್ಶಕರಾಗಿಯೂ ಕಾಣುತ್ತಾರೆ. ಆದರೆ ಸಂಸ್ಕೃತಿ ಚಿಂತಕರಲ್ಲ. ಇದುವರೆಗೂ ಬಂದ ಕೃತಿ ವಿಮರ್ಶೆಯ ಲೋಪದೋಷಗಳನ್ನು ಎತ್ತಿತೋರಿಸಿ, ಪುನರ್‌ಮೌಲ್ಯೀ ಕರಣಕ್ಕೆ ಅವರು ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ತಮ್ಮ ಸೂಕ್ಷ್ಮ ಒಳನೋಟಗಳಿಂದ ಪ್ರಾಚೀನ ಸಾಹಿತ್ಯವನ್ನು ಹೊಸ ಅರಿವಿನ ದೃಷ್ಟಿಕೋನದಲ್ಲಿ ಅಭ್ಯಸಿಸುವುದಲ್ಲದೆ ಸಾಂಪ್ರದಾಯಿಕ ವಿಮರ್ಶಾಲೋಕದ ಗ್ರಹೀತ ವಿಚಾರಗಳನ್ನೇ ಪ್ರಶ್ನಿಸುತ್ತಾರೆ. ಈ ಕೃತಿ ಸೃಷ್ಟಿಯಾದ ಕಾಲ, ಸಮಾಜ, ಸಾಹಿತ್ಯ ಅಂಶಗಳಿಂದ ವಿಮರ್ಶೆಯನ್ನು ಮಾಡುತ್ತಾ ಸಂಸ್ಕೃತಿಯ ಕಡೆಗೂ ದೃಷ್ಟಿಹಾಯಿಸುವುದರಿಂದ

ಅವರದ್ದು ಸಾಂಸ್ಕೃತಿಕ ವಿಮರ್ಶೆಯೂ ಕೂಡ ಆಗುತ್ತದೆ. ಅದು ಪರಂಪರೆಯ ಪುನರ್‌ವಿಮರ್ಶೆಯು ಕೂಡ ಆಗುತ್ತದೆ.

ಮೊದಲನೆಯದಾಗಿ ಜಿ.ಎಚ್. ನಾಯಕರ ವಿಮರ್ಶೆ ತನ್ನ ಕಾಲದವರೆಗೆ ಬಂದ ವಿಮರ್ಶಕರಿಗೆ ಕ್ರಿಯಾತ್ಮಕವಾಗಿ ಪ್ರತಿಕ್ರಿಯಿಸುತ್ತದೆ. ಎರಡನೆಯದಾಗಿ ಕೃತಿಯ ಒಳವಿನ್ಯಾಸದ ಸೂಕ್ಷ್ಮಾತಿಸೂಕ್ಷ್ಮ ಪರಿಶೀಲನೆ ಮತ್ತು ಮೌಲ್ಯಮಾಪನ, ಮೌಲ್ಯನಿರ್ಣಯ ಮಾಡುತ್ತದೆ. ಮೂರನೆಯದಾಗಿ ಇದುವರೆಗಿನ ವಿಮರ್ಶೆಯ ಮೌಲ್ಯಮಾಪನದ ಗ್ರಹಿಕೆಗಳನ್ನು ಪುನರ್‌ಮೌಲ್ಯ ಮಾಪನ ಮಾಡುತ್ತದೆ. ಅಂತಿಮವಾಗಿ ಸಾಂಸ್ಕೃತಿಕ ವಿಮರ್ಶೆಯೂ ಕೂಡ ಅವರ ವಿಮರ್ಶಾ ನೆಲೆಗಳಲ್ಲಿ ಒಂದಾಗುತ್ತದೆ. ಇದಕ್ಕೆ ಉದಾಹರಣೆಯಾಗಿ 'ಹರಿಶ್ಚಂದ್ರ ಕಾವ್ಯ-ಓದು, ವಿಮರ್ಶೆ' ಎಂಬ ವಿಮರ್ಶಾಕೃತಿ, ಹಾಗೆಯೇ ಇವರ ವಿಮರ್ಶಾ ಸಂಕಲನಗಳಲ್ಲಿ ಸಾಹಿತ್ಯಪ್ರಕಾರ ಮತ್ತು ಪಂಥಗಳ ಸಮೀಕ್ಷೆಗಳನ್ನು ಗಮನಿಸಬಹುದು. ಈ ಮಾತಿಗೆ ಪೂರಕವಾಗಿ ಮತ್ತು ನಾಯಕರು ಸಂಸ್ಕೃತಿ ವಿಮರ್ಶಕರು ಎಂಬುದಕ್ಕೆ ಟಿ.ಪಿ. ಅಶೋಕ ಅವರು "ನಮ್ಮ ಅತ್ಯುತ್ತಮ ವಿಮರ್ಶಕರಾದ ಕೀರ್ತಿನಾಥ ಕುರ್ತಕೋಟಿ, ಅನಂತಮೂರ್ತಿ, ಎಂ.ಜಿ. ಕೃಷ್ಣಮೂರ್ತಿ ಮತ್ತು ಲಂಕೇಶ್ ಒಂದು ರೀತಿಯಲ್ಲಿ ಸಂಸ್ಕೃತಿನಿಷ್ಠ ವಿಮರ್ಶಕರೇ, ಇನ್ನಿತರ ಪ್ರಮುಖ ವಿಮರ್ಶಕರಾದ ಜಿ.ಎಚ್. ನಾಯಕ, ಗಿರಡ್ಡಿ ಗೋವಿಂದರಾಜ ಅವರೂ ಕೇವಲ ಪ್ರಾಯೋಗಿಕ ವಿಮರ್ಶಕರಲ್ಲ ಇವರೆಲ್ಲ ಕೃತಿಯ ಒಳಲೋಕದ ಬಗ್ಗೆ ಮಾತ್ರವಲ್ಲ ಒಂದು ಕೃತಿಗೂ ಅದನ್ನು ನಿರ್ಮಿಸಿದ ಸಂಸ್ಕೃತಿಗೂ ಇರುವ ಸಂಬಂಧಗಳ ಬಗ್ಗೆಯೂ ನಮ್ಮ ಅರಿವನ್ನು ಹಿಗ್ಗಿಸಿದವರೇ[೧೫]" ಎಂಬ ಮಾತು ಗಮನಾರ್ಹವಾದುದು. ಏಕೆಂದರೆ ಜಿ.ಎಚ್. ನಾಯಕರು ಕೇವಲ ಪ್ರಾಯೋಗಿಕ ವಿಮರ್ಶಕರಲ್ಲ, ಸಂಸ್ಕೃತಿನಿಷ್ಠ ವಿಮರ್ಶಕರೂ ಕೂಡ ಎಂಬುದನ್ನು ಅಶೋಕ ಅವರು ಇಲ್ಲಿ ಸಾಬೀತು ಪಡಿಸುತ್ತಾರೆ. ಇದರಿಂದಾಗಿ ನಾಯಕರು ತಮ್ಮ ವಿಮರ್ಶೆಯಲ್ಲಿ ಸಂಸ್ಕೃತಿನಿಷ್ಠ ವಿಮರ್ಶೆಯ ನೆಲೆಗಳಿಂದ ಕೃತಿ ಅಧ್ಯಯನ ಮಾಡುತ್ತಾರೆ ಎಂಬುದಕ್ಕೆ ಇಲ್ಲಿ ಸಾಕ್ಷ್ಯ ದೊರೆತಂತಾಗಿದೆ.

ಜಿ.ಎಚ್. ನಾಯಕರು ಸೂಕ್ಷ್ಮಸಂವೇದನೆ ಮತ್ತು ಸಾಹಿತ್ಯ ಸಂಸ್ಕಾರದ ವಿವೇಚನೆ ಗಳೆರಡನ್ನೂ ಸಂಪೂರ್ಣವಾಗಿ ಕೃತಿಯೊಳಗಿನಿಂದಲೇ ಹುಡುಕುವುದರಿಂದ ಹೊರಹೊಮ್ಮುವ ವಿಮರ್ಶಾತ್ಮಕ ಹೊಳಹುಗಳು ಸಹಜವಾಗಿಯೇ ಮೌಲ್ಯವುಳ್ಳದ್ದಾಗಿರುತ್ತವೆ. ವಿಮರ್ಶಕರು ತಮ್ಮೆಲ್ಲ ಸಾಮರ್ಥ್ಯವನ್ನು ಸಂಪೂರ್ಣವಾಗಿ ಕೃತಿಯೊಡನೆ ತೊಡಗಿಸದೇ ಉತ್ತಮ ಕೃತಿಯೊಂದು ತನ್ನೆಲ್ಲ ಸೂಕ್ಷ್ಮಗಳನ್ನು ಬಿಟ್ಟುಕೊಡುವುದಿಲ್ಲ. ನಾಯಕರು ಇದನ್ನೇ ಒಂದು ಸವಾಲಾಗಿ ಸ್ವೀಕರಿಸಿ ತಮ್ಮ ವಿಮರ್ಶಾ ನಿರೂಪಣೆಯಲ್ಲಿ ಗೌರವಿಸಿ ಒಪ್ಪಿಕೊಳ್ಳುವುದರಿಂದಾಗಿ ಅವರ ವಿಮರ್ಶೆ ಸಾಂಸ್ಕೃತಿಕವಾಗಿಯೂ ಹೆಚ್ಚು ಮುಖ್ಯವಾಗುತ್ತದೆ. "ಕಾರಂತರ ಕಾದಂಬರಿಗಳಲ್ಲಿ ಜೀವನಶ್ರದ್ಧೆ ಮತ್ತು

ಶೋಧನೆ" ಎಂಬ ನಾಯಕರ ಲೇಖನವು ದುಡಿಮೆ, ಲೈಂಗಿಕತೆ, ಧರ್ಮ, ಬದುಕು, ಸಮಾಜ, ಮುದುಕಿಯರು, ಸಾಂಪ್ರದಾಯಿಕ ನಂಬಿಕೆಗಳು, ಬಾಲ ವಿಧವೆಯಾಗಿದ್ದ ಮುದುಕಿಯರು, ಒಂಟಿತನ– ಇವುಗಳನ್ನು ಕಾರಂತರ ಕಾದಂಬರಿ ಒಳಗಿನಿಂದಲೇ ಹುಡುಕುತ್ತದೆ. ಇದನ್ನು ಗಮನಿಸಿದಾಗ ನಾಯಕರು ಸಂಸ್ಕೃತಿಪರ ವಿಮರ್ಶಕರೇ ಎಂಬುದು ಸ್ಪಷ್ಟವಾಗುತ್ತದೆ.

'ಸಂಸ್ಕೃತಿ' ಕುರಿತ ಚಿಂತನೆ ನವೋದಯ ಕಾಲದಿಂದಲೂ ನಡೆದುಕೊಂಡು ಬಂದಿದೆ. ಆದರೆ ಸಾಹಿತ್ಯದಲ್ಲಿ 'ಸಂಸ್ಕೃತಿ' ವಿಮರ್ಶೆ ಸ್ವಾತಂತ್ರ್ಯೋತ್ತರದ ಎರಡನೆಯ ಅಥವಾ ಮೂರನೆಯ ದಶಕದಲ್ಲಿ ಆರಂಭಗೊಂಡಿರಬೇಕು. ನವ್ಯ ಮತ್ತು ನವ್ಯೋತ್ತರ ಸಂದರ್ಭದಲ್ಲಿ ಸಂಸ್ಕೃತಿ ವಿಮರ್ಶೆ ಹೆಚ್ಚು ವ್ಯಾಪಕವಾಯಿತು. ಜಿ.ಎಚ್. ನಾಯಕರು ಕ್ರಮವಾಗಿ ಎರಡು ಪಂಥಗಳ ಅಂತ್ಯ ಮತ್ತು ಆರಂಭ ಕಾಲದಲ್ಲಿ ವಿಮರ್ಶೆಗೆ ತೊಡಗಿಕೊಂಡಿದ್ದಾರೆ. ಆದ್ದರಿಂದ ನವ್ಯದ ಕೃತಿನಿಷ್ಠತೆಯೂ, ನವ್ಯೋತ್ತರದ ಸಂಸ್ಕೃತಿನಿಷ್ಠವೂ ಅವರ ಮೇಲೆ ಪ್ರಭಾವಬೀರಿದೆ.

ಸಂಸ್ಕೃತಿನಿಷ್ಠ ವಿಮರ್ಶೆಯನ್ನು ಮಾಡುವಾಗಲೂ ನವ್ಯದ ಕೃತಿನಿಷ್ಠ ವಿಮರ್ಶೆಯ ನೆಲೆಗಟ್ಟಿನಿಂದಲೇ ತಮ್ಮ ವಿಮರ್ಶೆಯ ತಾತ್ವಿಕ ಸ್ವರೂಪವನ್ನು ರೂಪಿಸಿಕೊಳ್ಳುತ್ತಾರೆ. ರಹಮತ್ ತರೀಕೆರೆ ಅವರು ಸಂಸ್ಕೃತಿಯನ್ನು ಕುರಿತು ಬರೆಯುತ್ತ "ಸಾಹಿತ್ಯ ವಿಮರ್ಶೆಯಲ್ಲಿ ಕೂಡ ಪ್ರವೇಶಿಸದೆ, ತಮ್ಮ ಸಾಹಿತ್ಯ ವಿಮರ್ಶೆಯು ಕೇವಲ ಸಾಹಿತ್ಯಿಕವಾಗಿಲ್ಲ, ಅದು ಬಹುಶಿಸ್ತೀಯವಾಗಿದೆ. ಸಾಮಾಜಿಕ ಬದಲಾವಣೆಗಳ ಬಗ್ಗೆ ಕಾಳಜಿ ಉಳ್ಳದ್ದಾಗಿದೆ ಎಂದು ಸೂಚಿಸಲು 'ಸಾಂಸ್ಕೃತಿಕ ವಿಮರ್ಶೆ' ಎಂದೂ ಕರೆದುಕೊಳ್ಳುವಂತೆಯೂ ತೋರುತ್ತದೆ. ಕಳೆದ ಹತ್ತು ವರ್ಷಗಳಲ್ಲಿ ಪ್ರಕಟವಾಗಿರುವ ಹೆಚ್ಚಿನ ಪುಸ್ತಕಗಳು 'ಸಂಸ್ಕೃತಿ' 'ಸಾಂಸ್ಕೃತಿಕ' ಹೆಸರನ್ನುಳ್ಳವಾಗಿವೆ. ಇದನ್ನು ನೋಡುವಾಗ 'ಸಾಂಸ್ಕೃತಿಕ' ಎಂಬುದು, ಜ್ಞಾನಶೋಧ ಮಾಡುವಲ್ಲಿ ಸಿಕ್ಕ ಉಪಯುಕ್ತವಾದ ಹೊಸ ವಿಧಾನ ಎಂಬುದಕ್ಕಿಂತ, ತಮ್ಮ ಅಧ್ಯಯನವನ್ನು ಸಮಕಾಲೀನ ಎಂದು ತೋರಿಸಲು ಬಂದಿರುವ ಜನಪ್ರಿಯ ವಿಶೇಷಣವಾಗಿರುವ ಸಂಶಯವೂ ಬರುತ್ತದೆ.[೧೬]" ಎಂದು ಹೇಳುತ್ತಾರೆ. ಈ ಮಾತನ್ನು ಗಮನಿಸಿದಾಗ 'ಸಮಕಾಲೀನ', 'ಅನಿವಾರ್ಯ', 'ನಿರಪೇಕ್ಷ', 'ನಿಜದನಿ' ಮುಂತಾದ ವಿಮರ್ಶಾ ಸಂಕಲನಗಳು ಕೃತಿನಿಷ್ಠವಾಗಿಯೂ, 'ಸಕಾಲಿಕ', 'ಗುಣಗೌರವ', 'ಹರಿಶ್ಚಂದ್ರ ಕಾವ್ಯ:ಓದು ವಿಮರ್ಶೆ', 'ಸ್ಥಿತಪ್ರಜ್ಞೆ' ಮೊದಲಾದ ಸಂಕಲನಗಳು ಸಂಸ್ಕೃತಿ ನಿಷ್ಠವಾಗಿಯೂ ಬಂದಿವೆ ಎಂದು ಅನಿಸುತ್ತದೆ. ನಾಯಕರು ತಮ್ಮ ವಿಮರ್ಶೆಯಲ್ಲಿ 'ಸಂಸ್ಕೃತಿ', 'ಸಾಂಸ್ಕೃತಿಕ' ಎಂಬ ಪದಗಳನ್ನು ಹೆಚ್ಚು ಬಳಸದಿದ್ದರೂ ಸಂಸ್ಕೃತಿನಿಷ್ಠ ವಿಮರ್ಶಕರಾಗಿ 'ಸಕಾಲಿಕ'(೧೯೯೫)ದಿಂದ ಗುರಿತಿಸಬಹುದು. ಈ ದಶಕದಿಂದಲೇ ಬಹುಶಿಸ್ತೀಯ ಅಧ್ಯಯನಗಳ ಧೋರಣೆಯು ಆರಂಭಗೊಂಡಿದ್ದು. ನಾಯಕರ

ವಿಮರ್ಶೆ ಸಾಹಿತ್ಯಿಕವಾಗಿಯೂ, ರಾಜಕೀಯವಾಗಿಯೂ, ಸಾಮಾಜಿಕವಾಗಿಯೂ, ಒಟ್ಟಾರೆಯಾಗಿ ಬಹಿಶಿಸ್ತೀಯವಾಗಿಯೂ ಆಲೋಚಿಸುತ್ತಾರೆ ಎನ್ನುವುದನ್ನು ನಿರ್ವಿವಾದವಾಗಿ ಗುರುತಿಸಬಹದು.

ಸಂಸ್ಕೃತಿಯ ಪರಿವ್ಯಾಪ್ತಿಯ ಒಳಗೆ ಸಾಹಿತ್ಯವೂ ಕೂಡ ಒಂದು ಅಂಗವಾಗಿದ್ದು, 'ಸಂಸ್ಕೃತಿ', 'ಸಾಂಸ್ಕೃತಿಕ' ಎಂಬ ಪರಿಭಾಷೆಗಳನ್ನು ಚಿಂತಕರು ತಮ್ಮ ಅಧ್ಯಯನದ ಪರಿಭಾಷೆಗಳನ್ನಾಗಿ ಬಳಸುತ್ತಾರೆ. ಸಾಂಸ್ಕೃತಿಕ ಎಂದಾಗ ಸಾಮಾಜಿಕ, ರಾಜಕೀಯ, ಸಾಹಿತ್ಯಿಕ, ಆರ್ಥಿಕ, ಧಾರ್ಮಿಕ, ಆಯಾಮಗಳು ಸೇರಲ್ಪಡುತ್ತವೆ. ಸಾಹಿತ್ಯಕವಾಗಿ ಗಮನಿಸಿದಾಗ ಒಂದು ಸಮಾಜದ ಸಂಸ್ಕೃತಿ, ರಾಜಕೀಯ ಸಂಸ್ಕೃತಿ, ಧಾರ್ಮಿಕ ಸಂಸ್ಕೃತಿ, ಸಾಹಿತ್ಯ ಸಂಸ್ಕೃತಿ, ಎಲ್ಲವನ್ನೂ ಕೃತಿಯೊಂದು ವಿವರಿಸುತ್ತದೆ. ವಿಮರ್ಶಕರು ಆ ಕೃತಿಯೊಳಗಿನ ಸಮಾಜ ಮತ್ತು ಜೀವನಾನುಭವಗಳ ಬದುಕನ್ನು ಕುರಿತು ಚರ್ಚಿಸುತ್ತಾರೆ. ಇದನ್ನು ಸಾಂಸ್ಕೃತಿಕ ವಿಮರ್ಶೆ ಎಂದು ಗುರುತಿಸಬಹುದು. ಹಾಗೆಯೇ ಆ ಕೃತಿಯೊಳಗಿನ ಭಾಷೆ, ಶೈಲಿ, ತಂತ್ರ, ಪ್ರತಿಮೆ, ಸಂವಿಧಾನ, ಪ್ರತಿಮೆ, ಮೌಲ್ಯ ಮೊದಲಾದವುಗಳೆಲ್ಲ ಮುಖ್ಯವಾಗುತ್ತವೆ ಮತ್ತು ಚರ್ಚೆಗೆ ಒಳಗಾಗುತ್ತವೆ. ಇದಿಷ್ಟನ್ನೇ ಕೃತಿನಿಷ್ಠ ಎಂದು ಏಕೆ ಕರೆಯಬೇಕು ಎಂಬ ಪ್ರಶ್ನೆಯು ಸಹಜವಾಗಿ ಬರುತ್ತದೆ. ಹೀಗೆ ಸಾಹಿತ್ಯ ಕೃತಿಯೊಂದರ ರಚನೆಯ ಸಂದರ್ಭದಲ್ಲಿ ಇವೆಲ್ಲ ಎಷ್ಟು ಮುಖ್ಯವಾಗುತ್ತವೆಯೋ ಅಷ್ಟೇ ಚರ್ಚಿಸುವಾಗಲೂ ಮುಖ್ಯವಾಗುತ್ತವೆ. ಕೃತಿಯೊಂದರ ಒಳಗೆ ಇವುಗಳನ್ನು ಕುರಿತು ವಿಶ್ಲೇಷಿಸುವುದನ್ನು ಕೃತಿನಿಷ್ಠ ಎಂದು ಮಾತ್ರ ಗುರುತಿಸದೇ 'ಕೃತಿಸಂಸ್ಕೃತಿ' ಎಂದು ಕೂಡ ಗುರುತಿಸಬೇಕಾಗುತ್ತದೆ. ಇಂತಹ 'ಕೃತಿಸಂಸ್ಕೃತಿ' ನಾಯಕರ ವಿಮರ್ಶೆಯ ಸೂಕ್ಷ್ಮತೆಯಲ್ಲಿ ಅಡಗಿದೆ. ಭಾಷೆ, ಶೈಲಿ, ತಂತ್ರ, ಪ್ರತಿಮೆ, ಸಂಕೇತ, ಪಾತ್ರಗಳು, ನಿರೂಪಣ ವಿಧಾನ, ಮೌಲ್ಯಗಳನ್ನು ವಸ್ತು, ಅನುಭವ, ಅಭಿವ್ಯಕ್ತಿ, ಸೃಜನಶೀಲತೆಯ ಹಿನ್ನಲೆಯಲ್ಲಿ ಜೀವನಾನುಭವಗಳ ಬಗೆಗೂ ವಿಶ್ಲೇಷಿಸುವುದು ಮುಖ್ಯವಾಗಿ ಕಂಡುಬರುತ್ತದೆ. ಜಿ.ಎಚ್. ನಾಯಕರೇ ಒಂದು ಕಡೆ ಬರೆಯುತ್ತಾ "ಭಾಷೆ, ಸಾಹಿತ್ಯ ಸಂದರ್ಭ, ಸಂಸ್ಕೃತಿ ಸಂದರ್ಭ, ಎದುರಿಸುತ್ತಿರುವ ಬಿಕ್ಕಟ್ಟು, ತೊಡರು ಎಂಬುದು ಗೊತ್ತಾಗುತ್ತದೆ. ಅಂತಃಕರಣ ಕೇಂದ್ರಿತವಾದ ಸಂಸ್ಕೃತಿಯನ್ನು ಬೆಳೆಸುವುದಕ್ಕೆ ಸಾಹಿತ್ಯ, ಕಲೆಗಳ ಪಾತ್ರದ ಮಹತ್ವದ ಬಗ್ಗೆ ಅರಿವುಳ್ಳವರಿಗೆ ಈ ತೊಡಕಿನ, ಬಿಕ್ಕಟ್ಟಿನ ಗಂಭೀರ ಸ್ವರೂಪ ಅರ್ಥವಾಗುತ್ತದೆ. ಕನ್ನಡ ಭಾಷೆಯ ಎಂಥ ಅಪಾಯ ಸ್ಥಿತಿಯಲ್ಲಿ ಇರುವಂಥ ಪರಿಸ್ಥಿತಿ ಭರದಿಂದ ನಿರ್ಮಾಣವಾಗುತ್ತಿರುವಾಗ ಕನ್ನಡ ಸಾಹಿತ್ಯದ ಸೃಷ್ಟಿಶಕ್ತಿಯ ಸಾಮರ್ಥ್ಯ ವೃದ್ಧಿಯ ಬಗ್ಗೆ ಆಶಾವಾದಿಗಳಾಗಿರುವುದು ಹೇಗೆ? ಅಂತಃಕರಣ ಕೇಂದ್ರಿತವಾದ ಸಂಸ್ಕೃತಿಯ ಕನಸು ಆದರ್ಶ ಕಾಣುವುದಾದರೂ ಹೇಗೆ? ಈ ಕುರಿತು ಸಾಹಿತಿಗಳು ಗಂಭೀರವಾಗಿ ಯೋಚಿಸಬೇಕಾಗುತ್ತದೆ.[೧೭]" ಎಂದು ಆಲೋಚಿಸುತ್ತಾರೆ. ಸಾಹಿತಿಗಳು ಅಂತಃಕರಣದ ಸಂಸ್ಕೃತಿಯನ್ನು ಭಾಷೆ, ಸಂಸ್ಕೃತಿ ಸಾಹಿತ್ಯದ ಮುಖೇನ ಗಂಭೀರವಾದ ಚಿಂತನೆಯನ್ನು ನಡೆಸಬೇಕು

ಎನ್ನುವುದು ನಾಯಕರ ಆಶಯ. ಅಂತಃಕರಣ ಸಂಸ್ಕೃತಿಯನ್ನು ಕೃತಿಯೊಳಗೂ ಕಟ್ಟುವ ಆಶಯವನ್ನು ಅವರು ವ್ಯಕ್ತಪಡಿಸುತ್ತಾರೆ. ಭಾಷೆ, ಸಾಹಿತ್ಯ, ಸಮಾಜ, ಸಂಸ್ಕೃತಿಗೆ ಸಂಬಂಧಿಸಿದಂತೆ ಸಾಂಸ್ಕೃತಿಕ ವಿಮರ್ಶೆಯ ಮೌಲ್ಯಾತ್ಮಕ ದೃಷ್ಟಿಯ ವಿಮರ್ಶೆಗೆ ಒಳಗಾಗಿ ತಮ್ಮ ಜೀವನಾನುಭವಗಳ ಘಟ್ಟಗಳನ್ನು ತಮ್ಮ 'ಗುಣಗೌರವ' ಕೃತಿಯಲ್ಲಿ ನಾಯಕರು ದಾಖಲಿಸುತ್ತಾರೆ. ನಾಯಕರು ನಿರ್ದಿಷ್ಟವಾಗಿ 'ಸಂಸ್ಕೃತಿ' ವಿಮರ್ಶೆಯ ಬಗೆಗೆ ವ್ಯಾಖ್ಯಾನಿಸುವುದಿಲ್ಲ. ಆದರೆ ಅವರ 'ಸ್ಥಿತಿಪ್ರಜ್ಞೆ', 'ಸಕಾಲಿಕ', 'ಗುಣಗೌರವ', 'ಹರಿಶ್ಚಂದ್ರ ಕಾವ್ಯ; ಓದು ವಿಮರ್ಶೆ' ಮುಂತಾದ ಕೃತಿಗಳಲ್ಲಿ ಸಂಸ್ಕೃತಿ ಪರವಾದ ವಿಮರ್ಶೆಯನ್ನು ಬಹಳ ಅರ್ಥಪೂರ್ಣವಾಗಿ ಮಾಡುತ್ತಾರೆ.

## ಟಿಪ್ಪಣಿಗಳು:

೧. ಶಾಂತಿನಾಥ ದೇಸಾಯಿ, 'ನವ್ಯಸಾಹಿತ್ಯ ದರ್ಶನ', ಪುಟ-೧೪೧

೨. ಅಶೋಕ.ಟಿ.ಪಿ, 'ಸಾಹಿತ್ಯ ಸಂಪರ್ಕ', ಪುಟ-೧೬೫

೩. ಅಶೋಕ್ ಟಿ.ಪಿ, 'ಪುಸ್ತಕ ಪ್ರೀತಿ', ಪುಟ-೩೦೦

೪. ದಾಮೋದರರಾವ್.ಬಿ, 'ಆಯಾಮಗಳು', ಪುಟ-೭೯

೫. ಬರಗೂರು ರಾಮಚಂದ್ರಪ್ಪ, 'ಸಂಸ್ಕೃತಿ; ಶ್ರಮ ಮತ್ತು ಸೃಜನಶೀಲತೆ', ಪುಟ-೧೮೪

೬. ಶ್ರೀಮತಿ ಎಚ್.ಎಸ್, 'ಹಳಗನ್ನಡ ಸಾಹಿತ್ಯಾಧ್ಯಯನ ಸಮೀಕ್ಷೆ', ಪುಟ-೧೨೦

೭. ಅದೇ, ಪುಟ-೧೨೧-೧೨೨

೮. ಶಿವರುದ್ರಪ್ಪ ಜಿ.ಎಸ್, ಲಕ್ಷ್ಮೀನಾರಾಯಣ ಭಟ್ಟ ಎನ್.ಎಸ್.(ಸಂ), 'ಪ್ರಾಯೋಗಿಕ ವಿಮರ್ಶೆ ಪೀಠಿಕೆ', ಪುಟ-೯

೯. ಜಿ.ಎಚ್. ನಾಯಕ, 'ಸ್ಥಿತಿ ಪ್ರಜ್ಞೆ', ಪುಟ-೧೩೦

೧೦. ಶಿವರುದ್ರಪ್ಪ ಜಿ.ಎಸ್, 'ವಿಮರ್ಶೆಯ ಪೂರ್ವ-ಪಶ್ಚಿಮ', ಪುಟ-೬೬

೧೧. ರಾಮಚಂದ್ರನ್ ಸಿ.ಎನ್, 'ಸಾಹಿತ್ಯ ವಿಮರ್ಶೆ', ಪುಟ-೫೭

೧೨. ಜಿ.ಎಚ್. ನಾಯಕ, 'ಸಕಾಲಿಕ', ಪುಟ-೬೦

೧೩. ಕೇಶವ ಶರ್ಮ ಕೆ, 'ಮಾರ್ಕ್ಸ್‌ವಾದಿ ಸಾಹಿತ್ಯ ವಿಮರ್ಶೆ', ಪುಟ-೮೩

೧೪. ನಾಗರಾಜ ಡಿ.ಆರ್, 'ಅಲ್ಲಮಪ್ರಭು ಮತ್ತು ಶೈವ ಪ್ರತಿಭೆ', ಪುಟ-೪೮-೪೯

೧೫. ಅಶೋಕ್ ಟಿ.ಪಿ, 'ಸಾಹಿತ್ಯ ಸಂದರ್ಭ', ಪುಟ-೨೩೧

೧೬. ರಹಮತ್ ತರೀಕೆರೆ, 'ಸಾಂಸ್ಕೃತಿಕ ಅಧ್ಯಯನ', ಪುಟ-೪೯

೧೭. ಜಿ.ಎಚ್. ನಾಯಕ, 'ಸಕಾಲಿಕ', ಪುಟ-೭೯

## ಅಧ್ಯಾಯ: ೪.

# ಜಿ.ಎಚ್. ನಾಯಕರ ವಿಮರ್ಶೆ: ವಿಭಿನ್ನ ಸಾಹಿತ್ಯ ಪಂಥಗಳ ಗ್ರಹಿಕೆ

ಳ.೧. ಪ್ರಾಚೀನ ಸಾಹಿತ್ಯ
ಳ.೨. ನವೋದಯ ಸಾಹಿತ್ಯ
ಳ.೩. ಪ್ರಗತಿಶೀಲ ಸಾಹಿತ್ಯ
ಳ.ಳ. ನವ್ಯ ಸಾಹಿತ್ಯ
ಳ.೫. ನವ್ಯೋತ್ತರ ಸಾಹಿತ್ಯ

ಕನ್ನಡ ಸಾಹಿತ್ಯ ಪರಂಪರೆ ತನ್ನದೇ ಆದ ವಿಶಿಷ್ಟ ಮೌಲ್ಯಗಳಿಂದ ಅಂದಂದಿನ ಮತಧರ್ಮಕ್ಕನುಗುಣವಾಗಿ ಸ್ಪಂದಿಸುತ್ತಾ ಬೆಳೆದು ಬಂದಿದೆ. ಅಂದಂದಿನ ಸಾಂಸ್ಕೃತಿಕ ವಲಯದೊಳಗೆ ತನ್ನ ಬೇರುಗಳನ್ನು ಬಿಡುತ್ತ, ಹೊಸ ಹೊಸ ಸಂವೇದನೆಗೆ ಸ್ಪಂದಿಸುವಂತಹ ಸಾಹಿತ್ಯ ರಚನೆಯನ್ನು ಮಾಡುತ್ತಲೂ ಅದು ಬಂದಿದೆ. ಅಭಿವ್ಯಕ್ತಿಸುವ ಶೈಲಿಯಲ್ಲಿ ಅನೇಕ ಸ್ವತಂತ್ರ ಮಾರ್ಗಗಳು ಬಂದಿವೆ. ಜೊತೆಗೆ ಅನುಕರಣ ಮಾರ್ಗಗಳು ಬಂದಿವೆ. ಇದು ಕನ್ನಡ ಸಾಹಿತ್ಯ ಚರಿತ್ರೆಯ ಅವಲೋಕನದಿಂದ ಯಾರಿಗಾದರೂ ವೇದ್ಯವಾಗುತ್ತದೆ. ಪ್ರಾಚೀನ ಮತ್ತು ಆಧುನಿಕ ಕನ್ನಡ ಸಾಹಿತ್ಯ ಎರಡು ವಿಭಿನ್ನ ಪ್ರಭಾವಕ್ಕೆ ಒಳಗಾಗಿವೆ. ಪ್ರಾಚೀನ ಕನ್ನಡ ಸಾಹಿತ್ಯ ಸಂಸ್ಕೃತ ಸಾಹಿತ್ಯ ಪ್ರಭಾವಕ್ಕೂ ಆಧುನಿಕ ಕನ್ನಡ ಸಾಹಿತ್ಯವು ಪಾಶ್ಚಾತ್ಯ ಸಾಹಿತ್ಯದ ದಟ್ಟ ಪ್ರಭಾವಕ್ಕೂ ಒಳಗಾಗಿದೆ. ಹೀಗಾಗಿ ಕನ್ನಡ ಸಾಹಿತ್ಯದಲ್ಲಿ ಛಂದಸ್ಸಾಹಿತ್ಯ ಮತ್ತು ಛಂದೋಮುಕ್ತ ಮಾದರಿಯ ರಚನೆಗಳು ಪ್ರಾರಂಭವಾದವು. ಈ ಹಿನ್ನೆಲೆಯ ಸಾಹಿತ್ಯ ಚರಿತ್ರೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಜಿ.ಎಚ್. ನಾಯಕರು ಸಾಹಿತ್ಯವನ್ನು ನವ್ಯ ಸಾಹಿತ್ಯದ ವಿಮರ್ಶಾ ಮಾರ್ಗದ ನೆಲೆಯಿಂದ ಅವಲೋಕಿಸುತ್ತಾರೆ.

ಜಿ.ಎಚ್. ನಾಯಕರು ಸಾಹಿತ್ಯಾವಲೋಕನ ಮಾಡುವಾಗ ಎರಡು ರೀತಿಯಲ್ಲಿ ಸಾಹಿತ್ಯವನ್ನು ವಿಭಜನೆಯನ್ನು ಮಾಡಿಕೊಳ್ಳುತ್ತಾರೆ. ಒಂದನೆಯದಾಗಿ ಕನ್ನಡ ಸಾಹಿತ್ಯದ ಆರಂಭಕಾಲದಿಂದ ಮುದ್ದಣನವರೆಗಿನ ಕಾಲವನ್ನು ಪ್ರಾಚೀನ ಕನ್ನಡ ಸಾಹಿತ್ಯವೆಂದೂ ಎರಡನೆಯದಾಗಿ ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯವನ್ನು ಆಧುನಿಕ ಕನ್ನಡ ಸಾಹಿತ್ಯವೆಂದೂ ಅವರು ವಿಭಜಿಸಿಕೊಳ್ಳುತ್ತಾರೆ. ನಾಯಕರು ಯಾವುದೇ ಕಾಲಘಟ್ಟವನ್ನು ಪರಿಶೀಲಿಸುವಾಗ ಪರಂಪರೆಯ ಮಜಲುಗಳನ್ನು ಅರಿಯುವ ಸಂದರ್ಭದಲ್ಲಿ ಚಾರಿತ್ರಿಕ ಪ್ರಜ್ಞೆಯ ನೆಲೆಯೊಳಗೆ ವಿವೇಚಿಸುತ್ತಾರೆ. ನಾಯಕರು ಈ ಧೋರಣೆಯ ನೆಲೆಯಲ್ಲಿಯೇ ಸಮಗ್ರವಾಗಿ ಎಲ್ಲಾ ಸಾಹಿತ್ಯ ಪಂಥಗಳನ್ನು ಗ್ರಹಿಸುತ್ತಾರೆ.

ಜಿ.ಎಚ್. ನಾಯಕರ ಎಲ್ಲಾ ವಿಮರ್ಶಾ ಸಂಕಲನಗಳಲ್ಲಿ ಪರಂಪರೆ ಮತ್ತು ಚಾರಿತ್ರಿಕ ಪ್ರಜ್ಞೆಯು ಪ್ರಧಾನವಾಗಿ ಕೆಲಸ ಮಾಡಿದೆ. ಆದ್ದರಿಂದ ಪ್ರಾಚೀನ ಸಾಹಿತ್ಯ, ನವೋದಯ ಸಾಹಿತ್ಯ, ಪ್ರಗತಿಶೀಲ ಸಾಹಿತ್ಯ, ನವ್ಯ ಸಾಹಿತ್ಯ ಮತ್ತು ನವ್ಯೋತ್ತರ ಸಾಹಿತ್ಯಗಳ ಅನುಸಂಧಾನಿಕ ಚರ್ಚೆಯನ್ನು ಅವರು ಮಾಡುತ್ತಾರೆ. ಜಿ.ಎಚ್. ನಾಯಕರ 'ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಮಾರ್ಗಗಳು; ಒಂದು ಸಂಕ್ಷಿಪ್ತ ಸಮೀಕ್ಷೆ' (ಸಮಕಾಲೀನ), 'ಪರಂಪರೆ ಮತ್ತು ಸಮಕಾಲೀನ ಕನ್ನಡ ಸಾಹಿತ್ಯ,' ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ; ನನ್ನ ಅನಿಸಿಕೆಗಳು,' 'ಕನ್ನಡದಲ್ಲಿ ನವ್ಯಕಾವ್ಯ; ಪರಿಚಯಾತ್ಮಕ ಸಮೀಕ್ಷೆ,' 'ಕನ್ನಡ ಸಣ್ಣಕತೆ; ಒಲವು ನಿಲುವುಗಳು' (ಅನಿವಾರ್ಯ), 'ಪ್ರಾಚೀನ ಮತ್ತು ಆಧುನಿಕ

ಕನ್ನಡ ಸಾಹಿತ್ಯ; ಒಂದು ನೋಟ' (ನಿರಪೇಕ್ಷ) ಮತ್ತು 'ಹೊಸಗನ್ನಡ ಕವಿತೆ; ಪ್ರಸ್ತಾವನೆ' (ನಿಜದನಿ) ಎಂಬ ಲೇಖನಗಳಲ್ಲಿ ಕನ್ನಡ ಸಾಹಿತ್ಯದ ಚಿತ್ರಣವನ್ನು ಸಂಕ್ಷಿಪ್ತವಾಗಿ ಮೌಲ್ಯೀಕರಿಸಿ ದಾಖಲಿಸುತ್ತಾರೆ. ಹೀಗೆ ದಾಖಲಿಸುವಾಗ ಪ್ರಾಚೀನ ಸಾಹಿತ್ಯ, ನವೋದಯ ಸಾಹಿತ್ಯ, ಪ್ರಗತಿಶೀಲ ಸಾಹಿತ್ಯ, ನವ್ಯಸಾಹಿತ್ಯ ಮತ್ತು ನವ್ಯೋತ್ತರ ಸಾಹಿತ್ಯವನ್ನು ತಮ್ಮ ವಿಮರ್ಶೆಯ ತಾತ್ವಿಕ ನೆಲೆಗಟ್ಟಿನಲ್ಲಿ ನಾಯಕರು ಪರಿಶೀಲಿಸಿ ಸಾಹಿತ್ಯವನ್ನು ಗ್ರಹಿಸುತ್ತಾರೆ.

## ೪.೧. ಪ್ರಾಚೀನ ಸಾಹಿತ್ಯ

ಜಿ.ಎಚ್. ನಾಯಕರು ಹಲವಾರು ವಿದ್ವಾಂಸರು ಅಭಿಪ್ರಾಯ ಪಡುವಂತೆಯೇ ಕನ್ನಡ ಭಾಷೆಯನ್ನು ಪ್ರಾಚೀನವಾದ ಸಾಹಿತ್ಯ ಪರಂಪರೆಯುಳ್ಳ ಜೀವಂತಭಾಷೆ ಎಂದು ಗುರುತಿಸುತ್ತಾರೆ. ಹಾಗೆಯೇ ಮತಧರ್ಮವನ್ನು ದೃಷ್ಟಿಯಲ್ಲಿಟ್ಟುಕೊಂಡು ಪ್ರಾಚೀನ ಸಾಹಿತ್ಯವನ್ನು ಅರ್ಥೈಸುತ್ತಾರೆ. ಈ ಅರ್ಥ ವಿವರಣೆಗಾಗಿ ಪ್ರಾಚೀನ ಸಾಹಿತ್ಯವನ್ನು ಅವರು ಮೂರು ರೀತಿಯ ವಿಭಾಗಕ್ರಮವನ್ನಾಗಿ ಮಾಡುತ್ತಾರೆ. ಅವೆಂದರೆ: ೧) ಜೈನ ಯುಗ (ಕ್ರಿ.ಶ.ಸು ೧೧೫೦ ರವರೆಗೆ), ೨)ವೀರಶೈವ ಯುಗ (ಕ್ರಿ.ಶ.ಸು ೧೧೫೦ ರಿಂದ ೧೫ ನೇ ಶತಮಾನದವರೆಗೆ) ಮತ್ತು ೩)ಬ್ರಾಹ್ಮಣ ಯುಗ (೧೫ ನೇಯ ಶತಮಾನದಿಂದ ೧೮೫೦ ರವರೆಗೆ). ಈ ರೀತಿಯ ಕಾಲಸೂಚಿ ವಿಭಾಗ ಕ್ರಮ ನಾಯಕರ ದೃಷ್ಟಿಯಲ್ಲಿ ಕೃತಕವಾಗಿದೆ. ಆದರೂ ಮತಧರ್ಮದ ಹಿನ್ನಲೆಯಲ್ಲಿ ಈ ಕ್ರಮ ಸರಿಯಾಗಿದೆ ಎಂದು ಗ್ರಹಿಸಿ ಪ್ರಾಚೀನ ಸಾಹಿತ್ಯವನ್ನು ಅವರು ವಿಶ್ಲೇಷಿಸುತ್ತಾರೆ. ಹೀಗೆ ಅವಲೋಕಿಸುವ ಸಂದರ್ಭದಲ್ಲಿ ಪ್ರಾಚೀನ ಸಾಹಿತ್ಯಗಳ ಸೃಜನಶೀಲ ಕೃತಿಗಳನ್ನು ಅನುಲಕ್ಷಿಸಿ ಅವರ ಗ್ರಹಿಕೆಯ ಶೋಧ ಆರಂಭವಾಗುತ್ತದೆ. ನಾಯಕರು ವಸ್ತು, ಅನುಭವ, ಅಭಿವ್ಯಕ್ತಿ, ಸೃಜನಶೀಲತೆ, ಎಂಬ ಪರಿಕಲ್ಪನೆಗಳ ಹಿನ್ನಲೆಯಲ್ಲಿ ಪ್ರಾಚೀನ ಸಾಹಿತ್ಯ ಕೃತಿಗಳನ್ನು ಚರ್ಚಿಸುತ್ತಾರೆ.

ನಾಯಕರು ಈ ಮೂರು ಮತಧರ್ಮಗಳ ಹಿನ್ನಲೆಯಲ್ಲಿ ಪ್ರಾಚೀನ ಸಾಹಿತ್ಯವನ್ನು ಪರಂಪರೆಯ ದೃಷ್ಟಿಯಿಂದ ಅವಲೋಕಿಸುತ್ತಾರೆ. ಇಡೀ ಪ್ರಾಚೀನ ಸಾಹಿತ್ಯವು ಸೃಜನಶೀಲತೆಯ ನೆಲೆಯಿಂದ ವಸ್ತು, ಅನುಭವ, ಅಭಿವ್ಯಕ್ತಿ, ಕ್ರಮದಲ್ಲಿ ತೋರಿದ ಸ್ವೋಪಜ್ಞತೆಯನ್ನು ಅವರು ಚಾರಿತ್ರಿಕ ದೃಷ್ಟಿಯಿಂದ ಗಮನಿಸುತ್ತಾರೆ. ಹಾಗೆ ಗಮನಿಸುವಾಗ ಜೈನ ಸಾಹಿತಿಗಳ ವಸ್ತು ಪರತಂತ್ರತೆಯ ಮಿತಿಯನ್ನು ಅವರು ಗುರುತಿಸುತ್ತಾರೆ. ಜೈನ ಸಾಹಿತ್ಯ ಸಂಪ್ರದಾಯವು ಮತೀಯ ಪ್ರಭಾವ ಮತ್ತು ಪ್ರಾಬಲ್ಯದಲ್ಲಿಯೇ ಪ್ರಧಾನವಾಗಿ ರೂಪುತಾಳಿದ್ದರ ಫಲವಾಗಿ ಸ್ವತಂತ್ರ ಕಾವ್ಯ ರಚನೆ ಸಾಧ್ಯವಾಗಿಲ್ಲ ಎಂದು ಮೌಲ್ಯನಿರ್ಣಯ ಮಾಡುತ್ತಾರೆ. ಆದರೆ ಆದಿಕವಿ ಪಂಪನ ಅಭಿವ್ಯಕ್ತಿ ಕ್ರಮದಲ್ಲಿನ 'ಗ್ರಥನಕೌಶಲ' (Craftmenship)ವನ್ನು ನಾಯಕರು ಮೆಚ್ಚುತ್ತಾರೆ. ಇದನ್ನು ಗಮನಿಸಿದಾಗ ವಸ್ತು

ಬೇರೆಯವರದ್ದಾದರೂ ಅಭಿವ್ಯಕ್ತಿಯಲ್ಲಿ ಹೊಸ ತಂತ್ರಗಾರಿಕೆ ಅಗತ್ಯವಾಗಿ ಇರಬೇಕೆಂಬುದು ನಾಯಕರ ಆಶಯ.

ಜೈನ ಕಾವ್ಯ ಪರಂಪರೆಯಲ್ಲಿ ಧಾರ್ಮಿಕ ಮತ್ತು ಲೌಕಿಕ ಕಾವ್ಯ ಪರಂಪರೆಯ ಚರಿತ್ರೆಯನ್ನು ದಾಖಲಿಸುತ್ತಾರೆ. ಜೈನ ಕವಿಗಳ ಪ್ರತಿಭೆಯನ್ನು ಗಮನಿಸಿ ಸ್ವತಂತ್ರ ಸಾಹಿತ್ಯ ಪರಂಪರೆಯ ನಿರ್ಮಾಣ ಮಾಡುವಲ್ಲಿ ಜೈನ ಪರಂಪರೆ ಸೋತು ಹೋಗಿದೆ ಎಂಬುದಾಗಿ ನಿರ್ಧರಿಸುತ್ತಾರೆ. ಜೈನ ಸಾಹಿತ್ಯವು ವೈವಿಧ್ಯತೆಯಲ್ಲಿ ತೋರುವ ಮೆರುಗನ್ನು ಸ್ವತಂತ್ರ ವಸ್ತುವಿನಲ್ಲಿ ತೋರಲಿಲ್ಲ, ಅದು ಭೋಗ-ಯೋಗಗಳ ಸಮನ್ವಯವನ್ನು ಸಾಧಿಸಿತು, ಭಾರತದ ಜೈನ ಸಾಹಿತ್ಯ ಪರಂಪರೆಯಲ್ಲಿಯೇ 'ಭರತೇಶ ವೈಭವ' ಅಪೂರ್ವವಾದ 'ಸಮನ್ವಯ' ಕೇಂದ್ರವಾಗುಳ್ಳ ಕೃತಿ ಎಂದು ನಾಯಕರು ಪ್ರಶಂಸಿಸುತ್ತಾರೆ. ಜಿನಸೇನಾಚಾರ್ಯರ 'ಪೂರ್ವ ಪುರಾಣ'ವನ್ನು ಪಂಪ-ರತ್ನಾಕರವರ್ಣಿ ಈರ್ವರೂ ಅನುಸರಿಸಿದ್ದಾರೆ, ಆದರೆ ಪಂಪನಿಗಿಂತ ರತ್ನಾಕರವರ್ಣಿ ಮೂಲವನ್ನು ಯಥಾವತ್ತಾಗಿ ಅನುಕರಿಸಿಲ್ಲ ಎಂಬುದಾಗಿ ಅವರು ಹೇಳುತ್ತಾರೆ. ನಾಯಕರು ಜೈನ ಸಾಹಿತ್ಯ ಕೃತಿಗಳ ಕಥಾವಸ್ತು, ಕಥನಕ್ರಮ, ಮತೀಯ ತತ್ವಬೋಧೆಗಳಲ್ಲಿ ಒಂದು ಸಮಗ್ರ ಜೀವನದೃಷ್ಟಿ ಅಥವಾ ದರ್ಶನವನ್ನು ಹುಡುಕುವ ಪ್ರಯತ್ನ ಮಾಡುತ್ತಾರೆ. ಇಡೀ ಜೈನ ಸಾಹಿತ್ಯದ ಪ್ರಭಾವ, ಪ್ರೇರಣೆಗಳ ಮೂಲವನ್ನೆ ಅವಲೋಕಿಸಿದಾಗಲೂ ಜೈನ ಕವಿಗಳ ಪ್ರತಿಭೆಯಿಂದ ಸ್ವತಂತ್ರ ಸಾಹಿತ್ಯ ಪರಂಪರೆಯಾಗಲಿ, ಸ್ವತಂತ್ರ ಸಾಹಿತ್ಯ ಕೃತಿಯಾಗಲಿ ಹುಟ್ಟಿ ಬರಲಿಲ್ಲ ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಹೀಗೆ ನಾಯಕರು ಜೈನ ಸಾಹಿತ್ಯ ಪರಂಪರೆಗೆ ಸ್ವತಂತ್ರ ಕಾವ್ಯ ರಚನೆಯನ್ನು ಮಾಡುವುದಾಗಲಿ, ಭಿನ್ನ ಮಾರ್ಗಗಳನ್ನು ಅನುಸರಿಸುವುದಾಗಲಿ ಸಾಧ್ಯವಾಗಲಿಲ್ಲ ಎಂದು ಹೇಳುತ್ತಾರೆ.

ನಾಯಕರಿಗೆ ಕಾವ್ಯಾಭಿವ್ಯಕ್ತಿ ವಿಶೇಷಮಾಧ್ಯಮವಾಗಿ ಹೊಮ್ಮಬೇಕೆಂಬ ಕಾಳಜಿ ಇದೆ ಎಂದು ಇದರಿಂದ ತಿಳಿಯುತ್ತದೆ. ಭಾಷೆ, ವಸ್ತು, ಅಭಿವ್ಯಕ್ತಿ, ಅನುಭವ, ಸೃಜನಶೀಲತೆ ಎಲ್ಲವೂ ಸಂಸ್ಕೃತದ ಮಣ್ಣಿನಿಂದ ಬೆಳೆದಿದ್ದು ಎಂಬ ಅಭಿಪ್ರಾಯವೂ ಸಹ ಹೊರಡುತ್ತದೆ. ನಾಯಕರ ಅವಲೋಕನದಲ್ಲಿ ಪ್ರಾಚೀನ ಸಾಹಿತ್ಯವು ಮಾರ್ಗ ಸಾಹಿತ್ಯದ ಪ್ರತಿಕೃತಿಯಂತಿದೆಯೇ ಹೊರತು ಸ್ವತಂತ್ರ ಸಾಹಿತ್ಯವೆಂದು ಗುರುತಿಸುವ ಪ್ರಯತ್ನವನ್ನು ಮಾಡಿಲ್ಲ. ಹಾಗೆ ನೋಡಿದರೆ ಜೈನ ಸಾಹಿತ್ಯ ಪರಂಪರೆ ಸ್ವತಂತ್ರ ಸಾಹಿತ್ಯ ಪರಂಪರೆಯನ್ನು ನಿರ್ಮಿಸಿಕೊಳ್ಳಲಿಲ್ಲ ಎಂದೇ ಅವರು ವ್ಯಾಖ್ಯಾನಿಸುತ್ತಾರೆ. ಈ ಅಭಿಪ್ರಾಯಗಳನ್ನು ಗಮನಿಸಿದಾಗ ನಾಯಕರು 'ಸ್ವತಂತ್ರ ಸಾಹಿತ್ಯ' ಪರಂಪರೆಯನ್ನು ಜೈನ ಸಾಹಿತ್ಯದಲ್ಲಿ ಹುಡುಕುವ ಪ್ರಯತ್ನ ಮಾಡುತ್ತಾರೆ ಅನಿಸುತ್ತದೆ. ಆದರೆ ಈ ಸಂದರ್ಭದ ಕವಿಗಳಿಗೆ ಕಾವ್ಯ ರಚನೆಯಲ್ಲಿ ಸ್ವತಂತ್ರವಿತ್ತೆ ಎಂಬ ಪ್ರಶ್ನೆಯನ್ನು ಇಲ್ಲಿ ಕೇಳಿಕೊಳ್ಳಬೇಕಾಗುತ್ತದೆ. ಆಗ

ಸ್ವತಂತ್ರವಿದ್ದಿದ್ದರೆ ವಸ್ತುವಿನ ಆಯ್ಕೆಯಲ್ಲೂ ಸ್ವತಂತ್ರವಿರುತಿತ್ತು. ಆದ್ದರಿಂದ ಈ ಕವಿಗಳು ಬರೆದದ್ದು ಸಾಮಾನ್ಯ ಜನರಿಗಲ್ಲ ಪಾಂಡಿತ್ಯದ ದೃಷ್ಟಿಯಿಂದ, ಎಂಬುದನ್ನು ಗ್ರಹಿಸಬೇಕಾಗುತ್ತದೆ ಈ ಹಿನ್ನೆಲೆಯಲ್ಲಿ. ಜೈನರಿಂದ ಈ ಸ್ವತಂತ್ರ ಸಾಹಿತ್ಯ ಎದುರು ನೋಡುವುದು ಸಾಧುವಲ್ಲ ಅನ್ನಿಸುತ್ತದೆ.

ನಾಯಕರು ವೀರಶೈವ ಸಾಹಿತ್ಯ ಪರಂಪರೆಯಲ್ಲಿ ವಚನ ಸಾಹಿತ್ಯವು ಸಮಾಜವಾದಿ ಆಂದೋಲನವಾಗಿ ರೂಪಗೊಂಡಿದೆ ಎಂದು ಹೇಳುತ್ತಾರೆ. ಸಾಮಾಜಿಕ ಕ್ಷೇತ್ರ ಮತ್ತು ಸಾಹಿತ್ಯ ಕ್ಷೇತ್ರ ಎರಡರಲ್ಲೂ ವಚನ ಸಾಹಿತ್ಯವು ಕ್ರಾಂತಿ ಮಾಡಿದುದನ್ನು ಅವರು ಗಮನಿಸುತ್ತಾರೆ. ಕನ್ನಡ ಸಾಹಿತ್ಯದಲ್ಲಿಯೇ ಪ್ರಥಮ ಬಾರಿಗೆ ಸ್ವೋಪಜ್ಞ ಸಾಹಿತ್ಯ ಪರಂಪರೆ ನಿರ್ಮಾಣವಾಗಿದ್ದು ವಚನಸಾಹಿತ್ಯದ ಮೂಲಕವೆಂದು ಅವರು ಗುರುತಿಸುತ್ತಾರೆ.

ವೀರಶೈವ ಸಾಹಿತ್ಯ, ಜೈನ ಸಾಹಿತ್ಯದಷ್ಟು ಪರಾಧೀನವಾಗಿಲ್ಲ. ವಸ್ತು, ಅನುಭವ, ಅಭಿವ್ಯಕ್ತಿ, ಸೃಜನಶೀಲತೆಯಲ್ಲಿ ವೀರಶೈವ ಸಾಹಿತ್ಯವು ಸ್ವತಃ ಕ್ರಿಯಾಶೀಲತೆಯಿಂದ ಕೂಡಿದ್ದಾಗಿದೆ. ಆದ್ದರಿಂದ ಜೈನ ಸಾಹಿತ್ಯಕ್ಕಿಂತ ವಚನಸಾಹಿತ್ಯ ಸ್ವೋಪಜ್ಞ ಸಾಹಿತ್ಯವಾಗಿದೆ ಎಂಬ ಅಭಿಪ್ರಾಯವನ್ನು ನಾಯಕರು ಮಂಡಿಸುತ್ತಾರೆ. ನಾಯಕರು ಬಸವಣ್ಣನ ವಚನಗಳಲ್ಲಿ ಕಾವ್ಯಾತ್ಮಕ ಗುಣ, ಅಲ್ಲಮ ಪ್ರಭುವಿನ ವಚನಗಳಲ್ಲಿ ಪ್ರವಾದಿಯ ದನಿ ಹಾಗೂ ಅಕ್ಕಮಹಾದೇವಿ ವಚನಗಳಲ್ಲಿ ಭಾವಗೀತಾತ್ಮಕ ಗುಣವನ್ನು ಗುರುತಿಸುತ್ತಾರೆ. ವಚನಗಳಲ್ಲಿ ಉಂಟಾಗುವ ಗೇಯತೆಯ ವಿನ್ಯಾಸವನ್ನು ಅವರು ಅವಲೋಕಿಸುತ್ತಾರೆ. ವಚನ ಸಾಹಿತ್ಯವು ಭಾರತದಲ್ಲಿ ಮಾತ್ರವಲ್ಲ ವಿಶ್ವ ಸಾಹಿತ್ಯ ಸಂದರ್ಭದಲ್ಲಿಯೇ ವಿಶಿಷ್ಟವಾದ ರಚನೆ ಎಂದು ಪ್ರಶಂಸಿಸುತ್ತಾರೆ. ಹಾಗೆಯೇ ವಚನ ಸಾಹಿತ್ಯದ ನಂತರದ ಹರಿಹರ ಮತ್ತು ರಾಘವಾಂಕರ ಕಾವ್ಯ ಪ್ರತಿಭೆಯನ್ನು, ಕಾವ್ಯದ ಗೇಯತೆ ಮತ್ತು ಸ್ವತಂತ್ರತೆಯನ್ನು ಹಾಗೂ 'ಅನುಭವ ದ್ರವ್ಯ', 'ಜೀವನದೃಷ್ಟಿಯ ಶೈಲಿ'ಯಲ್ಲಿನ ವಿಶೇಷತೆಯನ್ನು ಅವರು ಗಮನಿಸುತ್ತಾರೆ.

ವೈದಿಕ ಸಾಹಿತ್ಯವು ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಭಾಗವತ ದೃಷ್ಟಿಗಳಿಂದ ಕಾವ್ಯ ಪ್ರೇರಣೆಯನ್ನು ಪಡೆಯಿತು. ವಿಷ್ಣು, ಕೃಷ್ಣ, ರಾಮನಚರಿತೆ ಮತ್ತು ಮಹಿಮೆಗಳು ಕಾವ್ಯಾಭಿವ್ಯಕ್ತಿಯ ವಸ್ತುಗಳಾಗಿ ಸಂಚಾರ ಪಡೆದವು. ಕೀರ್ತನೆಗಳು ಸಾಮಾಜಿಕ ಧೋರಣೆಯನ್ನು ಹೊಂದಿದ್ದರೂ ವೀರಶೈವದ ರೂಪು ತಾಳಲಿಲ್ಲ, ಭಕ್ತಿಯ ನೆಲೆಯಲ್ಲಿ ವಿಜೃಂಭಿಸಿದವು ಎಂಬುದನ್ನು ನಾಯಕರು ಗುರುತಿಸುತ್ತಾರೆ. ನಾಯಕರು ಇಡೀ ಬ್ರಾಹ್ಮಣ ಅಥವಾ ವೈದಿಕ ಸಾಹಿತ್ಯವನ್ನು ಕುರಿತು ವಸ್ತು, ಅನುಭವ, ಅಭಿವ್ಯಕ್ತಿ, ಸೃಜನಶೀಲತೆ ಇವುಗಳಿಗೆ ಸಂಬಂಧಿಸಿದ ಧೋರಣೆಯಲ್ಲಿ ಬ್ರಾಹ್ಮಣ ಧಾರ್ಮಿಕ ಕಾವ್ಯ ಸಂಪ್ರದಾಯವು ಜೈನ ಮತ್ತು ವೀರಶೈವ ಧಾರ್ಮಿಕ ಕಾವ್ಯ ಸಂಪ್ರದಾಯವನ್ನೆ ಬಲುಮಟ್ಟಿಗೆ

ಅನುಸರಿಸಿದೆ ಎನ್ನುತ್ತಾರೆ. ಹೊಸ ಪ್ರವೃತ್ತಿ ಅಥವಾ ಹೊಸ ಪರಿಕಲ್ಪನೆಗಳನ್ನು ಅದು ಹುಟ್ಟು ಹಾಕಲಿಲ್ಲ ಎನ್ನುತ್ತಾರೆ.

**ಪ್ರಾಚೀನ ಸಾಹಿತ್ಯವನ್ನು ಕುರಿತು ಜಿ.ಎಚ್. ನಾಯಕರ ಗ್ರಹಿಕೆಗಳು**

- ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ವಸ್ತು, ಅನುಭವ, ಜೀವನದೃಷ್ಟಿಗಳಿಗೆ ಸಂಬಂಧಿಸಿದಂತೆ ಕವಿಗಳ ಸ್ವೋಪಜ್ಞತೆ ಅಭಿವ್ಯಕ್ತಗೊಂಡಿಲ್ಲ. ಸೃಜನಶೀಲ ಸಾಹಿತ್ಯದಲ್ಲಿ ಈ ಅಂಶಗಳು ಅಷ್ಟಾಗಿ ಕಾಣುವುದಿಲ್ಲ. ವಚನ ಸಾಹಿತ್ಯವು ಉಳಿದ ಜೈನ ಮತ್ತು ವೈದಿಕ ಸಾಹಿತ್ಯಕ್ಕಿಂತ ಭಿನ್ನವಾಗಿ ತನ್ನ ಪರಂಪರೆಯನ್ನು ಗುರುತಿಸಿಕೊಂಡಿತು ಎಂದು ನಾಯಕರು ಗ್ರಹಿಸುತ್ತಾರೆ.

- ಜೈನ, ವೀರಶೈವ, ಬ್ರಾಹ್ಮಣ ಸಾಹಿತ್ಯಗಳ ವಸ್ತು, ಅನುಭವ ಹಾಗೂ ಜೀವನದೃಷ್ಟಿಗಳು ಮತೀಯ ಚೌಕಟ್ಟಿಗೆ ಬದ್ಧವಾಗಿದ್ದವು. ಈ ಎಲ್ಲ ಮತಧರ್ಮಗಳಿಗೆ ಸೇರಿದ ಕವಿಗಳ ಸಾಹಿತ್ಯಿಕ ಪರಿಕಲ್ಪನೆಗೆ ಭಾರತೀಯ ಕಾವ್ಯ ಮೀಮಾಂಸೆಯೇ ಹಿನ್ನಲೆಯಾಗಿದೆ ಎಂಬುದನ್ನು ನಾಯಕರು ಗುರುತಿಸುತ್ತಾರೆ.

- ಮತಧರ್ಮದ ತತ್ವಗಳೇ ಮುಖ್ಯವಾಗಿ ಕವಿಯ ಸ್ವಂತದ ಜೀವನಾನುಭವ ನೆಲೆ ಕೆಳಗಿನದಾಯಿತು ಎಂದು ಅವರು ನಿರ್ಣಯಿಸುತ್ತಾರೆ.

- ಕವಿಗೆ ದಾರ್ಶನಿಕ ಸ್ಥಾನ ಅಥವಾ ಮೌಲ್ಯನಿರ್ಮಾಪಕನ ಸ್ಥಾನ ದೊರೆಯಲಿಲ್ಲ ಎಂಬುದಾಗಿ ನಾಯಕರು ನಿರ್ಧರಿಸುತ್ತಾರೆ.

- ಒಂದೇ ಕಾಲಾವಧಿಯಲ್ಲಿ ಬರೆಯುತ್ತಿದ್ದರೂ ಜೈನ, ವೀರಶೈವ ಹಾಗೂ ವೈದಿಕ ಕವಿಗಳು ವ್ಯವಹರಿಸುವ ಪ್ರಪಂಚಗಳು ಬೇರೆ ಬೇರೆಯಾಗಿವೆ. ವರ್ತಮಾನದ ವಾಸ್ತವ ಪ್ರಂಪಚ ಅವರ ಸಾಹಿತ್ಯದ ಒಳಗೆ ಪ್ರವೇಶ ಮಾಡಲೇ ಇಲ್ಲ ಎಂಬುದಾಗಿ ಅವರು ಹೇಳುತ್ತಾರೆ.

ಹೀಗೆ ನಾಯಕರು ಇನ್ನೂ ಮುಂತಾದ ನೆಲೆಗಳಲ್ಲಿ ಪ್ರಾಚೀನ ಸಾಹಿತ್ಯದ ಬಗೆಗಿನ ಗ್ರಹಿಕೆಗಳನ್ನು ದಾಖಲಿಸುತ್ತಾರೆ.

ನಾಯಕರು 'ಇಡಿ'ಯಾಗಿ ಪ್ರಾಚೀನ ಸಾಹಿತ್ಯವನ್ನು ಕುರಿತು "ಕನ್ನಡ ಸಾಹಿತ್ಯದ ಮೇಲೆ ಪ್ರಭಾವ ಬೀರಿದ ಮತಧರ್ಮಗಳಲ್ಲಿ– ಸಾಪೇಕ್ಷ ವ್ಯತ್ಯಾಸ ಗುರುತಿಸಬಹುದಾದರೂ–'ಇಹ'ಕ್ಕಿಂತ 'ಪರ' ನಿತ್ಯವಾದದ್ದು, 'ಇಹ' ಎಷ್ಟೇ ಆಪ್ಯಾಯಮಾನವಾಗಿ ಕಂಡರೂ ಅದು ಮಿಥ್ಯೆ, ಮಾಯೆ, ಹೇಯ; ಆದ್ದರಿಂದ ಕ್ಷಣಿಕ, ನಿರಾಕರಣ ಯೋಗ್ಯ ಎಂಬುದು ಅವುಗಳ ನಿಲುವು. ಅಷ್ಟಾದಶ

ವರ್ಣನೆಗಳು, ತೀರ್ಥಂಕರರ ಪೂರ್ವಾಶ್ರಮದ ಸುಖ, ಸಂಪತ್ತುಗಳ ವಿವರಗಳು ಅಂಥ ಕಡೆಗಳಲ್ಲಿ 'ಇಹ'ದ ಬದುಕಿನ ಸಮೃದ್ಧಿ, ವೈಭವಗಳನ್ನು ಕಾಣುತ್ತೇವೆ. ಆದರೂ ಕಾವ್ಯವು ಕೀರ್ತಿಸುವ ದೃಷ್ಟಿಯ ಹಿನ್ನೆಲೆಯಲ್ಲಿ ನೋಡಿದಾಗ ಅವೆಲ್ಲವೂ ನೇತ್ಯಾತ್ಮಕ ಮಹತ್ವವುಳ್ಳ ಸಂಗತಿಗಳಾಗಿ ಕಾಣಿಸುತ್ತವೆ. ಅವು ಕಥಾನಾಯಕನ ಹಿರಿಮೆಯನ್ನು ಮೆರೆಸುವುದಕ್ಕಾಗಿ ಪ್ರತಿನಾಯಕನ ಪರಾಕ್ರಮದ ಹೆಚ್ಚಳಿಕೆಯನ್ನು ನಿರೂಪಿಸುವಂಥ ರೀತಿಯದಾಗಿ ಕಾಣಿಸುತ್ತದೆ. ಅಂದರೆ ಪ್ರಾಚೀನ ಕನ್ನಡ ಸಾಹಿತ್ಯ ಪರಂಪರೆ ಈ ಲೋಕದ ಜೀವನ ಮತ್ತು ಮನುಷ್ಯನ ಜೀವನಾನುಭವಗಳನ್ನು ಕುರಿತಂಥ ಆಸಕ್ತಿಗೆ ಪ್ರಥಮ ಪ್ರಾಶಸ್ತ್ಯ ನೀಡಿದ್ದಾಗಿಲ್ಲ.[೧]" ಎಂದು ನಾಯಕರು ಹೇಳುತ್ತಾರೆ. ಪ್ರಾಚೀನ ಸಾಹಿತ್ಯದ ಮಿತಿಯನ್ನು ಗುರುತಿಸುವ ಮೂಲಕ ಆ ಸಾಹಿತ್ಯವನ್ನು ನಾಯಕರು ಗ್ರಹಿಸುತ್ತಾರೆ.

ನಾಯಕರು ಪ್ರಾಚೀನ ಸಾಹಿತ್ಯವನ್ನು ಅವಲೋಕಿಸುವಾಗ ಉಂಟಾಗುವ ಸಮಸ್ಯೆಗಳನ್ನು ಕುರಿತು "ಗತಕಾಲದ ಸಾಹಿತ್ಯ ಎಷ್ಟೆಂದರೂ ಭೂತ ಕಾಲದಲ್ಲಿ ಸೇರಿ ಹೋದದ್ದು, ಏನು ನಡೆಯಿತು, ಹೇಗೆ ಬೆಳೆಯಿತು, ಎಲ್ಲಿ ಗೆದ್ದಿತು, ಎಲ್ಲಿ ಬಿದ್ದಿತು ಎಂದು ಗುರುತಿಸುವಷ್ಟನ್ನು ಬಿಟ್ಟು ಅದರ ಹಣೆಯ ಬರಹವನ್ನೇ ಬದಲಿಸುವ ಶಕ್ತಿ, ಅವಕಾಶ ನಮಗೆ ಇಲ್ಲವೇ ಇಲ್ಲ.[೨]" ಎಂದು ಹೇಳುತ್ತಾರೆ. ಅಂದರೆ ಪ್ರಾಚೀನ ಸಾಹಿತ್ಯದ ಬಗೆಗಿನ ಗ್ರಹಿಕೆಗಳ ಜೊತೆಗೆ ಆ ಸಾಹಿತ್ಯವನ್ನು ಪ್ರವೇಶ ಮಾಡಿದಾಗ ಎದುರಿಸಬಹುದಾದ ನಾನ ಕಷ್ಟಗಳನ್ನು ಅವರು ಊಹಿಸುತ್ತಾರೆ. ಪ್ರಾಚೀನ ಸಾಹಿತ್ಯದ ಬಗೆಗಿನ ವಿಮರ್ಶೆಯು ದಾರಿ ತಪ್ಪಿಸುವಂಥದಾಗಬೇಕು. ಆಗ ಮಾತ್ರ ಸಂಶೋಧನಾತ್ಮಕ ಅಧ್ಯಯನದ ಅಗತ್ಯತೆ ಆರಂಭವಾಗುತ್ತದೆ ಎಂದು ನಾಯಕರು ಸ್ಪಷ್ಟಪಡಿಸುತ್ತಾರೆ. ಹೀಗೆ ನಾಯಕರು ವಿವಿಧ ಆಯಾಮಗಳ ದೃಷ್ಟಿಯಿಂದ ಪ್ರಾಚೀನ ಸಾಹಿತ್ಯವನ್ನು ಗ್ರಹಿಸುತ್ತಾರೆ.

## ೪.೨. ನವೋದಯ ಸಾಹಿತ್ಯ

ಜಿ.ಎಚ್. ನಾಯಕರು ಎಲ್ಲ ಸಾಹಿತ್ಯ ಪಂಥಗಳನ್ನು ಪರಂಪರೆಯ ಸೂಕ್ಷ್ಮ ನೆಲೆಯಿಂದಲೇ ಅವಲೋಕಿಸುತ್ತಾರೆ, ಕವಿ, ಕಾವ್ಯ, ಸಣ್ಣಕತೆ, ಕಾದಂಬರಿ ನಾಟಕದ ಸ್ವರೂಪದ ಬಗೆಗೆ ಅವರು ವಿಮರ್ಶಾತ್ಮಕ ನಿಲುವನ್ನು ತಾಳುತ್ತಾರೆ. ಆಯಾ ಕಾಲಘಟ್ಟದ ಸೂಕ್ಷ್ಮ ಸಂವೇದನೆಯಿಂದ ಕವಿ ಕೃತಿಯ ಅಭಿವ್ಯಕ್ತಿ ಕ್ರಮವನ್ನು ಚರ್ಚಿಸುತ್ತಾರೆ. ಅವರು ನವೋದಯ ಕಾವ್ಯದ ಸ್ವರೂಪವನ್ನು ಸ್ಪಷ್ಟವಾಗಿ ಭಾವಪರ ಎಂದು ಗ್ರಹಿಸುತ್ತಾರೆ.

ಜಿ.ಎಚ್. ನಾಯಕರು ನವೋದಯ ಸಾಹಿತ್ಯವನ್ನು ಮುಖ್ಯವಾಗಿ ಚಾರಿತ್ರಿಕ ದೃಷ್ಟಿಯಿಂದ ಕಾಣಬಯಸುತ್ತಾರೆ. ಬಿ.ಎಂ.ಶ್ರೀ ಯವರ 'ಇಂಗ್ಲಿಷ್ ಗೀತಗಳು' ನವೋದಯ ಸಾಹಿತ್ಯದ ಮೊದಲ ಆದ್ಯಗ್ರಂಥ. ಇದೊಂದು ಅನುವಾದ ಕವನ ಸಂಗ್ರಹ. ಪಾಶ್ಚಾತ್ಯ ರೊಮ್ಯಾಂಟಿಕ್ ಸಂಪ್ರದಾಯದ

ಪ್ರೇರಣೆ ಪಡೆದು ಬರೆದುದು ಈ ಕಾವ್ಯದ ಹೆಗ್ಗಳಿಕೆ. 'ಇಂಗ್ಲಿಷ್ ಗೀತಗಳು' ಹೊಸ ಕಾವ್ಯ ಪರಂಪರೆಯೊಂದನ್ನು ಹುಟ್ಟುಹಾಕಿದ್ದು ಇದರ ಮಹತ್ವಪೂರ್ಣ ಅಂಶಗಳಲ್ಲಿ ಒಂದು. ಕಾವ್ಯದ ಹೊಸ ವಸ್ತುರೂಪ, ಹೊಸ ಛಂದೋರೂಪ, ಹೊಸ ಭಾಷಾರೂಪಗಳನ್ನು ಕುರಿತು ಮುಕ್ತವಾಗಿ ಮುಂದಿನ ಕವಿಗಳಿಗೆ ಕಾವ್ಯದ ನಿರ್ದೇಶನವನ್ನು ನೀಡಿತು ಎಂದು ನಾಯಕರು ಹೇಳುತ್ತಾರೆ. ಹಾಗೆಯೇ ಕನ್ನಡದಲ್ಲಿ ರೊಮ್ಯಾಂಟಿಕ್ ಕಾವ್ಯಧೋರಣೆಯು ಮನುಷ್ಯ ಚೈತ್ಯನದ ಅನನ್ಯತೆಯನ್ನು ನೆಚ್ಚಿದ ತಾತ್ವಿಕ ಹಿನ್ನೆಲೆಯಲ್ಲಿ ಪ್ರಧಾನವಾಗಿ ರೂಪಿತವಾದದ್ದು ನವೋದಯ ಸಾಹಿತ್ಯದಲ್ಲಿ ಮಾತ್ರ ಎಂದು ಅವರು ನಿರೂಪಿಸುತ್ತಾರೆ.

ಜಿ.ಎಚ್. ನಾಯಕರು ನವೋದಯ ಸಾಹಿತಿಗಳ ಅಭಿವ್ಯಕ್ತಿ ಕ್ರಮವನ್ನು ಕುರಿತು "ಒಮ್ಮೆ ವ್ಯಷ್ಟಿದನಿಯಲ್ಲಿ, ಇನ್ನೊಮ್ಮೆ ಸಮಷ್ಟಿದನಿಯಲ್ಲಿ, ಮಗದೊಮ್ಮೆ ಮಿಶ್ರದನಿಯಲ್ಲಿ ತಮ್ಮ ಸೃಜನಶೀಲ ಚೈತನ್ಯವನ್ನು ದುಡಿಸಿಕೊಂಡಂತೆ ಕಾಣಿಸುತ್ತದೆ" ಎಂಬುದಾಗಿ ಗ್ರಹಿಸುತ್ತಾರೆ. ಆಗ ನವೋದಯ ಸಂಪ್ರದಾಯದ ಈ ದನಿಗಳನ್ನು ಆತ್ಮನಿಷ್ಠ ಅಥವಾ ವ್ಯಕ್ತಿನಿಷ್ಠವಾಗಿದೆ ಎಂದು ಗ್ರಹಿಸಿ ಈ ಮೇಲಿನ ಮೂರು ರೀತಿಯ ದನಿಗಳನ್ನು ವಿಶ್ಲೇಷಿಸುತ್ತಾರೆ.

೧. ನವೋದಯ ಸಾಹಿತ್ಯ ಸಂದರ್ಭದಲ್ಲಿ ಆತ್ಮನಿಷ್ಠ ಕಾವ್ಯಗಳು ಹೆಚ್ಚು ಬಂದಿವೆ, ಕನ್ನಡದ ನವೋದಯ ಕವಿಗಳು ಭಾವಗೀತೆಯ ಪ್ರಕಾರದಲ್ಲಿ ಈ ಬಗೆಯ ಕಾವ್ಯಗಳನ್ನು ಬರೆದಿದ್ದಾರೆ. ನವೋದಯ ಸಾಹಿತ್ಯವು ಅನಿರ್ಬಂಧಿತ ಸ್ಫೂರ್ತಿ ಮತ್ತು ಕಲ್ಪನಾಶಕ್ತಿಯ ಮೂಲಕ ವ್ಯಕ್ತಿ ಸ್ವಾತಂತ್ರ್ಯದ ಪರಮಸುಖವನ್ನು ಸೃಜನಶೀಲ ಸಂದರ್ಭದಲ್ಲಿ ಅನುಭವಿಸಿದರು ಎಂಬುದಾಗಿ ನಾಯಕರು ವ್ಯಕ್ತಿನಿಷ್ಠತೆಯನ್ನು ಗ್ರಹಿಸುತ್ತಾರೆ.

೨. ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕವಾದ ವಸ್ತು ವಿಷಯಗಳನ್ನು ಕುರಿತಂತೆ ನವೋದಯದ ಸಾಹಿತಿಗಳು ಇಲ್ಲಿ ಸಮಸ್ಟಿದನಿಯನ್ನು ಕಾಣುತ್ತಾರೆ. ಈ ವಸ್ತುಗಳ ಕವನಗಳಲ್ಲಿ ಮತ್ತು ಇತರ ಸಾಹಿತ್ಯ ಪ್ರಕಾರಗಳಲ್ಲಿ ಮಾತ್ರ ಈ ದನಿಯನ್ನು ಗುರುತಿಸುತ್ತಾರೆ.

೩. ಪ್ರಕೃತಿ, ಆಧ್ಯಾತ್ಮ, ಸಮಾಜ, ರಾಜಕಾರಣ, ಧರ್ಮ– ಈ ಎಲ್ಲ ವಸ್ತುಗಳನ್ನು ಕುರಿತು ಬರವಣಿಗೆಯಲ್ಲಿ ಮಿಶ್ರದನಿ ಅಥವಾ ಸಮನ್ವಯದನಿ ಕೇಳಿಸುತ್ತದೆ.

ಹೀಗೆ ನಾಯಕರು ನವೋದಯ ಕಾಲಘಟ್ಟದ ಕವಿಗಳ ಅನುಭವ, ಅಭಿವ್ಯಕ್ತಿಯನ್ನು ಕುರಿತ ಅಭಿಪ್ರಾಯಗಳನ್ನು ವ್ಯಕ್ತ ಪಡಿಸುತ್ತಾರೆ. ಈ ಸಂದರ್ಭದಲ್ಲಿ ಕುವೆಂಪು ಅವರ ಕಾವ್ಯ, ಕಾದಂಬರಿ, ನಾಟಕಗಳನ್ನು, ಮಾಸ್ತಿಯವರ ಸಣ್ಣಕತೆಗಳನ್ನು, ಕಾರಂತರ ಕಾದಂಬರಿಗಳನ್ನು ಹಾಗೂ

ಬೇಂದ್ರೆಯವರ ಕಾವ್ಯಗಳನ್ನು ಗಮನಿಸುತ್ತಾರೆ. ಆಗ ಆ ಕೃತಿಗಳ ವಸ್ತು, ಅನುಭವ, ಅಭಿವ್ಯಕ್ತಿ, ಸೃಜನಶೀಲತೆಯ ನೆಲೆಗಳಲ್ಲಿ ಗತಿ ವಿನ್ಯಾಸಗಳನ್ನು ಗುರುತಿಸುತ್ತಾರೆ.

ಜಿ.ಎಚ್. ನಾಯಕರು ನವೋದಯದ ಮಹತ್ವದ ಸಾಹಿತಿಗಳಲ್ಲಿ ಕುವೆಂಪು ಒಬ್ಬರೇ ಬ್ರಾಹ್ಮಣೇತರ ಸಾಹಿತಿಯಾಗಿದ್ದಾರೆ. ಇವರ ಸಾಹಿತ್ಯದಲ್ಲಿ ಜೀವನ ಮೌಲ್ಯಗಳು, ಆಧ್ಯಾತ್ಮಿಕ ಆಶಯಗಳು, ಅಭಿವ್ಯಕ್ತಿ ಮಾಧ್ಯಮವಾದ ಭಾಷೆಯು ಸಂಸ್ಕೃತ ಭೂಯಿಷ್ಠತೆಯಿಂದ ಕೂಡಿದೆ, ಹಳಗನ್ನಡ ಗತಿ–ಇವೆಲ್ಲವನ್ನು ನಾಯಕರು ಗುರುತಿಸುತ್ತಾರೆ. ಮಾಸ್ತಿಯವರ ಸಣ್ಣಕತೆಗಳಲ್ಲಿ ಧಾರ್ಮಿಕ ಆಶಯವನ್ನು ಮತ್ತು ಸಂಸ್ಕೃತಿಯ ಜೀವನ ಮೌಲ್ಯಗಳನ್ನು ಓದುಗರಿಗೆ ಮುಟ್ಟಿಸುವ ಹವಣಿಕೆ ಗಾಢವಾಗಿದೆ ಎಂದು ಅವರು ನಿರ್ಣಯಿಸುತ್ತಾರೆ. ಬೇಂದ್ರೆಯವರ ಸಾಹಿತ್ಯದಲ್ಲಿ ಚಾರಿತ್ರಿಕ, ಧಾರ್ಮಿಕ, ಆಧ್ಯಾತ್ಮಿಕ ಮೌಲ್ಯಗಳನ್ನು ಕುರಿತಂಥ ಹಲುಬುವಿಕೆ ಇದೆ. ಇಂಥ ಮನಸ್ಥಿತಿಯಿಂದಲೆ ಕಾವ್ಯಾಭಿವ್ಯಕ್ತಿಗೆ ಪ್ರವೇಶ ಮಾಡುತ್ತಾರೆ. ಬದುಕಿನ ಖುಷಿ, ಆಸಕ್ತಿ, ತೀವ್ರತೆಯ ಸುಖಕ್ಕಾಗಿ, ಸ್ವಾನುಭವದ ಹಾಗೂ ಆವರಣದ ಎಚ್ಚರದಲ್ಲಿ ಬೇಂದ್ರೆಯವರು ಕವನ ಕಟ್ಟುತ್ತಾರೆ. ಹಾಗೂ ಬೆಂದ್ರೆಯವರು ಆ ಕಾಲದಲ್ಲಿ ಉಳಿದವರಿಗಿಂತ ಹೆಚ್ಚು ಕವನ ಕಟ್ಟಿದ್ದು ಎಂದು ನಾಯಕರು ನಿರ್ಧರಿಸುತ್ತಾರೆ. ಕಾರಂತರು ಅನುಭವದ ದೃಷ್ಟಿಯಿಂದ ಬಲುದೊಡ್ಡ ಬಾಳು ಬಾಳಿದರು. ಅವರಷ್ಟು ವೈವಿಧ್ಯ ಪೂರ್ಣವಾದ ಆಸಕ್ತಿ ಮತ್ತು ಅಭಿರುಚಿಯನ್ನು ರೂಢಿಸಿಕೊಂಡ ಸಾಹಿತಿ ಕರ್ನಾಟಕದಲ್ಲಿ ಬೇರೊಬ್ಬರಿಲ್ಲ ಎಂದು ನಾಯಕರು ಪ್ರಶಂಸಿಸುತ್ತಾರೆ. ವಾಸ್ತವ ಬದುಕಿನ ವಾಸ್ತವ ಚಿಂತನಶೀಲತೆಯ ನೆಲೆಯಲ್ಲಿಯೇ ರಾಷ್ಟ್ರೀಯತೆ ಮತ್ತು ಭಾರತೀಯತೆಯ ಪರಿಕಲ್ಪನೆಗಳನ್ನು ನವೋದಯದ ಸಂದರ್ಭದಲ್ಲಿ ಕಾರಂತರು ಕಂಡುಕೊಂಡಿದ್ದರು ಎಂಬುದಾಗಿ ನಾಯಕರು ಹೇಳುತ್ತಾರೆ, ನಾಯಕರು ಈ ನಾಲ್ವರು ಲೇಖಕರ ದೃಷ್ಟಿ ಧೋರಣೆಗಳಿಂದ ನವೋದಯ ಸಾಹಿತ್ಯವನ್ನು ಗ್ರಹಿಸುತ್ತಾರೆ. ಬಿ.ಎಂ.ಶ್ರೀಯವರ ಸಾಹಿತ್ಯದಿಂದ ನವೋದಯ ಉಗಮವನ್ನು ಗುರುತಿಸುತ್ತಾರೆ. ನಂತರದಲ್ಲಿ ಕುವೆಂಪು, ಮಾಸ್ತಿ, ಬೇಂದ್ರೆ, ಕಾರಂತರಲ್ಲಿ ನವೋದಯ ಸಾಹಿತ್ಯದ ವಿಕಾಸವನ್ನು ಗ್ರಹಿಸುತ್ತಾರೆ. ಹೀಗೆ ಸಾಹಿತ್ಯ ಪಂಥಗಳಲ್ಲಿ ಮುಖ್ಯವೆನ್ನಬಹುದಾದ ಲೇಖಕರು ಮತ್ತು ಅವರ ಕೃತಿಗಳಿಂದಲೆ ನವೋದಯ ಸಾಹಿತ್ಯ ಪರಂಪರೆಯನ್ನು ಗ್ರಹಿಸುತ್ತಾರೆ.

ನವೋದಯ ಸಾಹಿತ್ಯ ಸಂದರ್ಭದಲ್ಲಿನ 'ಭಾರತೀಯತೆ' ಎಂಬ ಪರಿಕಲ್ಪನೆಯು 'ಹಿಂದೂ' ಧರ್ಮದ, ಹಿಂದೂ ಸಂಸ್ಕೃತಿಯ, ಹಿಂದೂ ಆಧ್ಯಾತ್ಮಿಕ ನೆಲೆಗಟ್ಟಿನ ಮೇಲೆ ರಚಿತವಾಗಿರುವುದನ್ನು ನಾಯಕರು ವಿಶ್ಲೇಷಿಸುತ್ತಾರೆ. ನವೋದಯ ಸಾಹಿತ್ಯದಲ್ಲಿ ರಾಷ್ಟ್ರೀಯತೆಯ ಪ್ರಶ್ನೆ, ಹಿಂದೂ ಧರ್ಮ, ಹಿಂದೂ ಸಾಂಸ್ಕೃತಿಕತೆ, ಹಿಂದೂ ಆಧ್ಯಾತ್ಮಿಕ ನೆಲೆಗಳನ್ನು ಕಾವ್ಯದಲ್ಲಿ ಅಭಿವ್ಯಕ್ತಿಸುವಷ್ಟು ಇನ್ನಾವುದೇ ಪ್ರಕಾರದಲ್ಲಿ ಈ ಹರವು ಅಷ್ಟು ಆಗಿಲ್ಲ ಎಂಬುದಾಗಿ ನಾಯಕರು ವಿಮರ್ಶಿಸುತ್ತಾರೆ.

ಜಿ.ಎಚ್. ನಾಯಕರು ನವೋದಯ ಸಾಹಿತ್ಯದ ಸಣ್ಣಕತೆಗಳ ಒಲವು ನಿಲುವುಗಳನ್ನು ಸ್ಪಷ್ಟಪಡಿಸುತ್ತಾರೆ, ಸಾಮಾಜಿಕ ಸಭ್ಯತೆ, ಸೌಜನ್ಯಗಳ ಚೌಕಟ್ಟಿನಲ್ಲಿಯೇ ಪರಿಣಾಮಕಾರಿಯಾದ ಸೌಂದರ್ಯವನ್ನು ನವೋದಯದವರು ಸಾಧಿಸುತ್ತಾರೆ, ನವೋದಯದವರಿಗೆ ಅನ್ಯಾಯಕ್ಕೆ, ದುರಂತಕ್ಕೆ ಗುರಿಯಾಗುವ ವ್ಯಕ್ತಿ, ಕೇವಲ ವ್ಯಕ್ತಿ ಮಾತ್ರವಾಗಿ ಕಾಣಿಸುವುದಿಲ್ಲ. ಒಂದು ತತ್ವದ, ಒಂದು ಆದರ್ಶದ, ಮೌಲ್ಯದ ಪ್ರತಿನಿಧಿಯಾಗಿರುತ್ತಾನೆ ಎಂದು ನಾಯಕರು ಗ್ರಹಿಸುತ್ತಾರೆ. ವ್ಯಕ್ತಿಯಾಗಿ ಅವನ ಅನುಭವ, ಅನಿಸಿಕೆಗಳನ್ನು ನಿಷ್ಠುರವಾಗಿ ಶೋಧಿಸದೆ ಹೆಚ್ಚು ಕಡಿಮೆ ಒಂದು ಮೌಲ್ಯದ ಪ್ರಾತಿನಿಧಿಕ ಸ್ತರದಲ್ಲಿ ಮಾತ್ರ ನವೋದಯದವರು ನೋಡುತ್ತಾರೆ. ಹಾಗೆಯೇ ನವೋದಯದಲ್ಲಿ ಬರುವ ಬಹುತೇಕ ಕತೆಗಳು ದುರಂತ, ತ್ಯಾಗವೆಂಬ ಮೌಲ್ಯಗಳನ್ನು ಅರಗಿಸಿಕೊಂಡು ಬರುತ್ತವೆಂಬುದಾಗಿ ನಾಯಕರು ಸಣ್ಣಕತೆಗಳನ್ನು ಅನುಲಕ್ಷಿಸಿ ಅಭಿವ್ಯಕ್ತ ಪಡಿಸುತ್ತಾರೆ.

ಜಿ.ಎಚ್.ನಾಯಕರು ನವೋದಯ ಸಾಹಿತ್ಯವನ್ನು ಗ್ರಹಿಸುವಾಗ ರಸಪರ ನಿಷ್ಠೆಯಿಂದ ಮಾತ್ರವೇ ನೋಡುವುದಿಲ್ಲ. ನವೋದಯ ಸಾಹಿತ್ಯದ ಬಗೆಗೆ ನವ್ಯ ವಿಮರ್ಶೆಯ ತಾತ್ವಿಕ ನೆಲೆಗಳಿಂದಲೇ ಅವಲೋಕಿಸುತ್ತಾರೆ. ಕುವೆಂಪು, ಮಾಸ್ತಿ, ದ.ರಾ. ಬೇಂದ್ರೆ, ಕಾರಂತರ ಬಗೆಗೆ ವಿಶ್ಲೇಷಿಸುವುದಿಲ್ಲ. ಅವರ ಕೃತಿಗಳನ್ನು ಅವಲೋಕಿಸಿ ಅವರ ಭಾಷೆ, ಶೈಲಿ, ಅಭಿವ್ಯಕ್ತಿ, ಜೀವನ ದೃಷ್ಟಿಯನ್ನು ನವೋದಯ ಕಾವ್ಯದ ನಿಲುವುಗಳಿಂದ ಸ್ಪಷ್ಟಪಡಿಸುತ್ತಾರೆ. ಕಾವ್ಯಾನುಭವ, ಕಲಾನುಭವ ಎಂಬ ನಿಲುವುಗಳು ನವೋದಯ ಕಾವ್ಯದ್ದಾಗಿವೆ ಎಂದು ನಾಯಕರು ತಮ್ಮ ನವೋದಯ ಸಾಹಿತ್ಯದ ಗ್ರಹಿಕೆಯಲ್ಲಿ ವ್ಯಕ್ತಪಡಿಸುತ್ತಾರೆ. ಹೀಗೆ ಕಾವ್ಯ ಸಣ್ಣಕತೆ, ಕಾದಂಬರಿ, ನಾಟಕ ಪ್ರಕಾರಗಳಲ್ಲಿ ನವೋದಯ ಸಾಹಿತ್ಯದ ಸ್ವೋಪಜ್ಞತೆಯನ್ನು ಹುಡುಕಾಟ ಮಾಡುತ್ತಾರೆ.

**೪.೩ ಪ್ರಗತಿಶೀಲ ಸಾಹಿತ್ಯ**

ಪ್ರಗತಿಶೀಲ ಸಾಹಿತ್ಯದಲ್ಲಿ ಸಣ್ಣಕತೆ ಮತ್ತು ಕಾದಂಬರಿ ಪ್ರಕಾರಗಳಲ್ಲಿ ಅತಿ ಹೆಚ್ಚು ಸೃಜನೆಯಾಯಿತು. ಕಾವ್ಯ ಪ್ರಕಾರವು ಇತರ ಪಂಥಗಳಲ್ಲಿ ಅಭಿವ್ಯಕ್ತಗೊಂಡಷ್ಟು ಮಹತ್ತರವಾದ ಸಂಖ್ಯೆಯಲ್ಲಿ ಇಲ್ಲಿ ರೂಪತಾಳಿಲ್ಲ. ಜಿ.ಎಚ್. ನಾಯಕರು ಈ ಸಾಹಿತ್ಯವನ್ನು "ಆಧ್ಯಾತ್ಮಿಕ, ರಾಜಕೀಯ, ಸೈನಿಕ ಪರಂಪರೆಯು ಸ್ಥಾಪಿಸಿದ ಮೌಲ್ಯಗಳನ್ನು ಕೀರ್ತಿಸುವ ನವೋದಯದಂತೆಯೇ ಭಾರತೀಯ ಸಂಸ್ಕೃತಿ ಪರವಾದ ಭಾವುಕ ಧೋರಣೆಯನ್ನೇ ಪ್ರಗತಿಶೀಲರು ಅನುಸರಿಸಿದರು." ಆದರೆ ಮಾರ್ಕ್ಸ್‌ವಾದದ ಗ್ರಹಿಕೆಯ ನೆಲೆಯಲ್ಲಿ ಸಮಾಜವನ್ನು ಶೋಷಕ-ಶೋಷಿತ ಎಂದು ಎರಡು

ಗುಂಪುಗಳಾಗಿ ವಿಂಗಡಿಸಿ ಶೋಷಿತರ ಪರ ದನಿ ಎತ್ತರಿಸಿ ಪ್ರಗತಿಶೀಲರು ಬರೆಯುತ್ತಾರೆಂದು ನಾಯಕರು ಗ್ರಹಿಸುತ್ತಾರೆ.

ನಾಯಕರು 'ಸಾಮಾಜಿಕನ್ಯಾಯ ದೊರೆಯಬೇಕಾದರೆ ಸಾಮಾಜಿಕ ವ್ಯವಸ್ಥೆ ಬದಲಾಗಬೇಕು' ಎಂಬ ಪ್ರಗತಿಶೀಲರ ಪೂರ್ವ ಗ್ರಹಿಕೆಯನ್ನು ನೆನೆಯುತ್ತಾರೆ. ಈ ವಿಷಯದಲ್ಲಿ ಪ್ರಗತಿಶೀಲರು ತೋರುವ ಕಳಕಳಿ ತೀವ್ರವಾಗಿರುತ್ತದೆ. ವ್ಯಗ್ರವಾಗಿರುತ್ತದೆ. ಆದ್ದರಿಂದ ಮಾನವೀಯ ಅನುಕಂಪ ಕ್ರೋಧವಾಗಿ, ರೋಷವಾಗಿ ಮಾರ್ಪಟ್ಟ ಮಾನಸಿಕ ಸ್ಥಿತಿಯಲ್ಲಿಯೇ ಪ್ರಗತಿಶೀಲರು ಕಥೆಗಳನ್ನು ಬರೆಯುತ್ತಾರೆ ಎಂಬುದಾಗಿ ನಾಯಕರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಮಾರ್ಕ್ಸ್‌ವಾದದಿಂದ ಪ್ರಗತಿಶೀಲರು ಪ್ರೇರಣೆಯನ್ನು ಪಡೆದಿದ್ದಾರೆ ಎಂದು ಕೂಡ ತಿಳಿಸುತ್ತಾರೆ. ಪ್ರಗತಿಶೀಲರ ಸಣ್ಣಕತೆ, ಕಾದಂಬರಿಗಳು ದೀನದಲಿತರ ಬದುಕಿನ ವಿನ್ಯಾಸಗಳನ್ನು ಚಿತ್ರಿಸುತ್ತವೆ. ಇದು ಪ್ರಗತಿಶೀಲ ಸಾಹಿತ್ಯದ ಒಂದು ತಾತ್ವಿಕ ನಿಲುವಾಗಿದೆ ಎಂಬ ಅಭಿಪ್ರಾಯದಲ್ಲೆ ನಾಯಕರು ಗ್ರಹಿಸುತ್ತಾರೆ.

ಪ್ರಗತಿಶೀಲ ಸಾಹಿತಿಗಳು ಸಣ್ಣಕತೆ, ಕಾದಂಬರಿ ಪ್ರಕಾರಗಳಂತೆ ಕಾವ್ಯ ಪ್ರಕಾರವನ್ನು ಅಭಿವ್ಯಕ್ತಿ ಮಾಧ್ಯಮವನ್ನಾಗಿ ಮಾಡಿಕೊಳ್ಳಲಿಲ್ಲ. ಸಣ್ಣಕತೆ ಮತ್ತು ಕಾದಂಬರಿಗಳಲ್ಲಿ ಜನಪರ ಧೋರಣೆ ಇವೆಯೇ ಹೊರತು ಜನಪರ ಕಾವ್ಯ ತತ್ವವೊಂದು ಈ ಸಂದರ್ಭದಲ್ಲಿ ರಚನೆಯಾಗಲಿಲ್ಲ. ಇದು ಸಾಧ್ಯವಾಗಿದ್ದು ಬಂಡಾಯ ಸಾಹಿತ್ಯ ಸಂದರ್ಭದಲ್ಲಿ ಮಾತ್ರ. ಈ ರೀತಿಯ ರಚನೆಗೂ ಮಾರ್ಕ್ಸ್‌ವಾದಿ ಧೋರಣೆಯೇ ಕಾರಣವಾಗಿದೆ ಎಂಬುದನ್ನು ನಾಯಕರ 'ಹೊಸಗನ್ನಡ ಕವಿತೆ; ಪ್ರಸ್ತಾವನೆ' ಲೇಖನ ಸಂದರ್ಭದಲ್ಲಿ ಗಮನಿಸಬಹುದು. ನಾಯಕರು 'ಭರತಮಾತೆಯ ವಾಕ್ಯ', 'ಕನ್ನಡ ತಾಯಿನೋಟ', 'ಕನಸಿನೊಳಗೊಂದು ಕನಸು', 'ಕುರುಡು ಕಾಂಚಾಣ', 'ಕಲ್ಕಿ', 'ಕೋಗಿಲೆ ಮತ್ತು ಸೋವಿಯತ್ ರಷ್ಯಾ', ಇಂತಹ ಕವನಗಳಲ್ಲಿ ಜನಪರ ಧೋರಣೆಯ ಪ್ರಗತಿಶೀಲ ಆಶಯಗಳನ್ನು ಕಾಣಬಹುದೆಂದು ಉದಾಹರಿಸುತ್ತಾರೆ.

## ೪.೪ ನವ್ಯ ಸಾಹಿತ್ಯ

ಕನ್ನಡ ನವ್ಯಕಾವ್ಯದ ಸಮೃದ್ಧಕಾಲ ಸುಮಾರು ೧೯೫೦–೧೯೭೦ ರ ಮಧ್ಯಾವಧಿ. ನವೋದಯದ ಸ್ಥಗಿತತೆ ಮತ್ತು ಪ್ರಗತಿಶೀಲರ ಸಾಹಿತ್ಯದ ಅನುಕರಣಶೀಲತೆಗಳನ್ನು ನಿವಾರಿಸಿ ಕೊಂಡು ನವ್ಯಕಾವ್ಯ ಮಾರ್ಗ ರಚಿತವಾಗಿದೆ. ಇದನ್ನು ಜಿ.ಎಚ್. ನಾಯಕರು ಐತಿಹಾಸಿಕ ಪ್ರಜ್ಞೆಯಿಂ ದಲೇ ಗುರುತಿಸುತ್ತಾರೆ. ಹಾಗೂ ಕನ್ನಡ ಸಾಹಿತ್ಯಕ್ಕೆ 'ನವ್ಯ ಸಾಹಿತ್ಯ'ವು ಹರಿದು ಬಂದ ಬಗೆಯನ್ನು ವಿವರಿಸುತ್ತಾರೆ. ಎಲ್ಲಾ ಪಂಥಗಳಂತೆಯೇ ನವ್ಯ ಸಾಹಿತ್ಯ ಪಂಥದಲ್ಲೂ ಕಾವ್ಯ ಪ್ರಕಾರವೆ ಮೊದಲು ಸಂವೇದನೆಗೊಂಡದ್ದು. ನವ್ಯಕಾವ್ಯ ಇಂಗ್ಲಿಷಿನ 'ಮಾಡ್ರರ್ನ್ ಪೊಯೆಟ್ರಿ' ಗೆ ಸಂವಾದಿಯಾಗಿ

ಕನ್ನಡದಲ್ಲಿ ಬಳಕೆಯಾಗಿದೆ. 'ನವ್ಯಕಾವ್ಯ' ಎಂದು ಕರೆದವರು ವಿ.ಕೃ.ಗೋಕಾಕ್. ಇದಕ್ಕೆ ಚಾರಿತ್ರಿಕ ದಾಖಲೆಯನ್ನು ನಾಯಕರು ಗ್ರಹಿಸುತ್ತಾರೆ. ಟಿ.ಇ. ಹ್ಯೂಮ್, ಎಜ್ರಾಪೌಂಡ್, ಟಿ.ಎಸ್.ಎಲಿಯಟ್ ಅವರುಗಳು ಆಧುನಿಕ ಕಾವ್ಯ ಪ್ರಯೋಗವನ್ನು ಮಾಡಿದರು ಇವರ ಪ್ರಭಾವಕ್ಕೆ ಒಳಗಾಗಿ ಆ್ಯಡೆನ್, ಸಿ.ಡಿ.ಲೂಯಿ, ಸ್ಟೀಫನ್‌ಸ್ಪೆಂಡರ್, ಡಿಲಾನ್ ಥಾಮಸ್ ಈ ಆಧುನಿಕ ಕಾವ್ಯಮಾರ್ಗವನ್ನು ಅನುಸರಿಸಿದರು. ಇಂಗ್ಲಿಷಿನಲ್ಲಿ ಉಗಮಗೊಂಡ ಆಧುನಿಕ ಕಾವ್ಯದ ಅವಸ್ಥಾಂತರಗಳನ್ನು ವಿ.ಕೃ.ಗೋಕಾಕ್ ಹಾಗೂ ಗೋಪಾಲಕೃಷ್ಣ ಅಡಿಗರು ಗುರಿತಿಸಿಕೊಂಡರು. ತಮ್ಮ ವ್ಯಾಖ್ಯಾನಗಳಿಗೆ ಅನುಗುಣವಾಗಿ ಇಂಗ್ಲಿಷಿನ 'ಆಧುನಿಕ ಕಾವ್ಯ'ವನ್ನು 'ನವ್ಯಕಾವ್ಯ'ವೆಂದು ಕರೆದುದರ ಬಗೆಗೆ ನಾಯಕರು ತಮ್ಮ ಲೇಖನಗಳಲ್ಲಿ ಕಾಳಜಿಪೂರ್ವಕವಾಗಿ ವಿಶ್ಲೇಷಿಸುತ್ತಾರೆ.

ಜಿ.ಎಚ್. ನಾಯಕರು ನವ್ಯಸಾಹಿತ್ಯದಲ್ಲಿ ಎರಡು ಒಳಪ್ರಭೇದಗಳನ್ನು ಗುರುತಿಸುತ್ತಾರೆ. ಅವು ಗೋಕಾಕರ ನವ್ಯಕಾವ್ಯ ಮತ್ತು ಅಡಿಗರ ನವ್ಯಕಾವ್ಯವೆಂದು ವಿಭಾಗಿಸಿಕೊಂಡು ಚರ್ಚಿಸುತ್ತಾರೆ. ನಾಯಕರು ಗೋಕಾಕರ ನವ್ಯಕಾವ್ಯದ ನೆಲೆಗಳನ್ನು ೧೯೪೦ ರ 'ಸಮುದ್ರಗೀತೆಗಳು' ಕಾವ್ಯದಿಂದ ಗುರುತಿಸುತ್ತಾರೆ. ೧೯೫೦ ರ ನಂತರದಲ್ಲಿ ನವ್ಯಕಾವ್ಯದ ಸೈದ್ಧಾಂತಿಕ ಪ್ರತಿಪಾದನೆಯನ್ನು ಗಮನಿಸಿ ಭಾಷೆ ಮತ್ತು ಛಂದೋರೂಪಗಳಲ್ಲಿ ಗೋಕಾಕರು ಬಗೆಬಗೆಯ ಪ್ರಯೋಗ ಮಾಡಿದ್ದಾರೆ. ಮುಕ್ತ ಛಂದಸ್ಸು, ತಂತ್ರವಿಧಾನದಲ್ಲಿ ಪ್ರತಿಮನಿಷ್ಠತೆ, ಸಾಂಕೇತಿಕತೆಗಳನ್ನು ಅಳವಡಿಸಿಕೊಳ್ಳುವ ಬಗೆಯಲ್ಲಿಯೂ ಹೊಸತನ ಕಾಣಿಸುತ್ತದೆ ಎಂದು ಹೇಳುತ್ತಾರೆ. ಗೋಕಾಕರ ನವ್ಯಕಾವ್ಯದ ಲಕ್ಷಣಗಳನ್ನು ನಾಯಕರು ಈ ರೀತಿ ಗ್ರಹಿಸಿಕೊಡುತ್ತಾರೆ. ಅವುಗಳು ಬಳಕೆಮಾತು, ಛಂದಸ್ಸಿನಲ್ಲಿಯ ನವೀನ ಪ್ರಯೋಗ, ಪ್ರತಿಮಾ ಪ್ರಧಾನತೆ, ವಾಸ್ತವಿಕ ಚಿತ್ರಸೃಷ್ಟಿ, ಪಾರಿಭಾಷಿಕ ಶೈಲಿ, ವಸ್ತುವಿನ ಆಯ್ಕೆಯಲ್ಲಿಯ ಸ್ವಾತಂತ್ರ್ಯ, ಬುದ್ಧಿಪ್ರಧಾನತೆ, ವ್ಯಕ್ತಾತೀತ ಮೌಲ್ಯಗಳಿಗೆ ಪ್ರಧಾನತೆ ಎಂಬ ಎಂಟು ಲಕ್ಷಣಗಳನ್ನು ನಾಯಕರು ಹೆಸರಿಸುತ್ತಾರೆ. ನವ್ಯ ಸಾಹಿತ್ಯದ ಕಾವ್ಯದಲ್ಲಿನ ವಸ್ತು ಮತ್ತು ಆಶಯವನ್ನು ಭೇದಿಸಲು ಸಹಕಾರಿಯಾಗಿವೆ. ನವ್ಯದ ದೃಷ್ಟಿಕೋನವನ್ನು ಇದರಿಂದ ತಿಳಿಯಲಾಗುತ್ತದೆ. ಈ ಎಂಟು ಲಕ್ಷಣಗಳನ್ನಿಟ್ಟುಕೊಂಡು ಗೋಕಾಕರು ಕಾವ್ಯ ಬರೆದಿದ್ದರ ಬಗ್ಗೆ ಮಾಹಿತಿನೀಡುತ್ತಾರೆ. ಹೀಗೆ ಹೇಳುವಾಗ 'ನವ್ಯಕಾವ್ಯ' ಬರೆಯುವ ಗೋಕಾಕರಲ್ಲಿ ಅಭಿಜಾತ ಕಾವ್ಯ ಪ್ರತಿಭೆಗಿಂತ ವ್ಯುತ್ಪತ್ತಿ ಪ್ರಧಾನವಾದ ಕಾವ್ಯತತ್ವ ಮತ್ತು ಆಧ್ಯಾತ್ಮಿಕ ವಿಚಾರಗಳು ಅವರ ಕಾವ್ಯವನ್ನು ಮುನ್ನಡೆಸಿದವು ಎಂಬುದನ್ನು ದಾಖಲಿಸುತ್ತಾರೆ. ಗೋಕಾಕರ ಕಾವ್ಯದ ಪ್ರಭಾವವು ಗಂಗಾಧರಚಿತ್ತಾಲ, ಸು.ರಂ.ಎಕ್ಕುಂಡಿ ,ಶಂಕರ್‌ಮೋಕಾಶಿ ಪುಣೇಕರ, ಎಂ. ಅಕಬರ್ ಆಲಿ, ಇವರ ಮೇಲಾಗಿರುವುದನ್ನು ಗುರುತಿಸುತ್ತಾರೆ.

ಅಡಿಗರ ಸಾಹಿತ್ಯವನ್ನು 'ಅತಿನವ್ಯ'ವೆಂದು ಗೋಕಾಕರು ಕರೆದಿರುವುದನ್ನು ನಾಯಕರು ವಿರೋಧಿಸಿ 'ಅಡಿಗರ ನವ್ಯ ಸಾಹಿತ್ಯ' ಎಂದು ಗುರುತಿಸಿದರು. ಗೋಕಾಕರ ರೀತಿಯಲ್ಲಿಯೇ ಅಡಿಗರ

ರೀತಿಯ ನವ್ಯಕಾವ್ಯದಲ್ಲಿಯೂ ಸಂಕೇತನಿಷ್ಠತೆ, ಪ್ರತಿಮಾಪ್ರಧಾನತೆ, ನವೋದಯ ರೀತಿಯ ನಿಯತ ಛಂದಸ್ಸಿನ ಉಲ್ಲಂಘನೆ, ಬುದ್ಧಿ ಪ್ರಧಾನತೆಗಳ ಮೇಲೆ ಗಾಢವಾದ ಒತ್ತು ಕಾಣಬರುವುದನ್ನು ನಾಯಕರು ಗಮನಿಸುತ್ತಾರೆ. ಅಡಿಗರ ಕಾವ್ಯದಲ್ಲಿ ಆಧ್ಯಾತ್ಮದ ತುಡಿತವಿರುವುದನ್ನು ದಾಖಲಿಸುತ್ತಾರೆ. ಅಡಿಗರ ಕಾವ್ಯದ ಕಾಳಜಿಗಳನ್ನು ನಾಲ್ಕು ರೀತಿಯಲ್ಲಿ ವಿಭಾಗಿಸುತ್ತಾರೆ. ಅವುಗಳು–

೧) ಭೂತಕಾಲಕ್ಕೂ ವ್ಯಕ್ತಿಗೂ ಇರುವ ಸಂಬಂಧ

೨) ನೆಲ–ಮುಗಿಲುಗಳ ಕರ್ಷಣ ಕೇಂದ್ರದಲ್ಲಿರುವ ವ್ಯಕ್ತಿಯ ಸ್ಥಿತಿ

೩) ಸಮಾಜ ಮತ್ತು ವ್ಯಕ್ತಿಯ ಸಂಬಂಧ

೪) ಕಾವ್ಯಾನುಭವ ಮತ್ತು ಅಭಿವ್ಯಕ್ತಿ ವಿಧಾನದ ಸಂಬಂಧ

ಜಿ.ಎಚ್. ನಾಯಕರು ಗೋಕಾಕರ ಮತ್ತು ಅಡಿಗರ ಅವಲೋಕನದಿಂದ ನವ್ಯ ಸಾಹಿತ್ಯವನ್ನು ಗಮನಿಸುತ್ತಾರೆ. ಆಗ ನವ್ಯದ ಗ್ರಹಿಕೆಗಳು ಸುಸ್ಪಷ್ಟವಾಗುತ್ತವೆ. ಅದರಂತೆಯೇ ಪ್ರತಿಮಾನಿಷ್ಠತೆ, ಸಂಕೇತ, ಕರ್ಷಣ, ತಾಂತ್ರಿಕ ವಿಧಾನ, ಮಣ್ಣಿನ ವಾಸನೆ, ತೀಕ್ಷ್ಣಸಂವೇದನೆ, ಬುದ್ಧಿಯ ಪ್ರಾಧಾನ್ಯತೆ, ಭ್ರಮನಿರಸನ, ಮೌಲ್ಯಗಳ ಪುನರ್‌ವಿಮರ್ಶೆ, ದ್ವಂದ್ವ ಮುಂತಾದ ನೆಲೆಗಳಲ್ಲಿಯೇ ನವ್ಯಕಾವ್ಯ ಅರ್ಥವಿಸ್ತಾರವನ್ನು ಪಡೆಯುತ್ತದೆ ಎಂಬ ಗ್ರಹಿಕೆಯೆ ನಾಯಕರಲ್ಲೂ ಕೂಡ ಕಾಣುತ್ತದೆ.

ನವ್ಯಕಾವ್ಯ ಮಾರ್ಗವು ಚಿಂತನಪರ ಕಾವ್ಯ ಮಾರ್ಗವಾಗಿದೆ ಎಂದು ನಾಯಕರು ಹಲವಾರು ಕವಿತೆಗಳ ಉದಾಹರಣೆಯನ್ನು ಕೊಡುತ್ತಾರೆ. ಕೆ.ಎಸ್.ನರಸಿಂಹಸ್ವಾಮಿಯವರ 'ಮನೆಯಿಂದ ಮನೆಗೆ', 'ತೆರೆದಬಾಗಿಲು', ಅಡಿಗರ 'ಭೂಮಿಗೀತ', 'ಭೂತ', 'ಕೂಪಮಂಡೂಕ' 'ಶ್ರೀರಾಮನವಮಿದಿವಸ', ಬಿ.ಸಿ.ರಾಮಚಂದ್ರ ಶರ್ಮರ 'ಪಾಂಡು ಮಾದ್ರಿ', ಜಿ.ಎಸ್. ಶಿವರುದ್ರಪ್ಪನವರ 'ಮಬ್ಬಿನಿಂದ ಮಬ್ಬಿಗೆ', 'ಸಂಜೆದಾರಿ', ಪಿ.ಲಂಕೇಶ್‌ರ 'ಅವ್ವ', ಕೆ.ಎಸ್. ನಿಸಾರ್ ಅಹಮದ್ ಅವರ 'ರಾಮನ್‌ಸತ್ತಸುದ್ದಿ', ಚಂದ್ರಶೇಖರ ಕಂಬಾರರ 'ಗಂಗಾಮಾಯಿ' ಮುಂತಾದ ಕವನಗಳನ್ನು ಹೊಸಗನ್ನಡದ ಚಿಂತನ ಪರ ಕಾವ್ಯವೆಂದು ಗುರಿತಿಸಿ ನವ್ಯಕಾವ್ಯ ಮಾರ್ಗದ ಗುಂಪಿಗೆ ನಾಯಕರು ಸೇರಿಸುತ್ತಾರೆ. ನಾಯಕರು ಈ ಕಾವ್ಯಗಳ ಮೂಲಕ ನವ್ಯಸಾಹಿತ್ಯದಲ್ಲಿ ಕಾವ್ಯವು ಅತಿಹೆಚ್ಚು ಬೌದ್ಧಿಕ ಕಸರತ್ತಿನೊಂದಿಗೆ ನಡೆಯುತಿತ್ತು ಎಂಬುದನ್ನೆ ನಾಯಕರು ಶೋಧಿಸಿ ಹೇಳುತ್ತಾರೆ.

ವ್ಯಕ್ತಿ ಕೇಂದ್ರಿತ ಸಂವೇದನೆಯ ನೆಲೆಯಲ್ಲಿ ನವ್ಯಕಾವ್ಯದ ಅನುಭವ ವಿಸ್ತರಣೆಯಾಗುವುದು ಎಂದು ನಾಯಕರು ಅಭಿಪ್ರಾಯ ಪಡುತ್ತಾರೆ. ನಾಯಕರ ದೃಷ್ಟಿಯಲ್ಲಿ ನವ್ಯಕಾವ್ಯದ ಅನುಭವ ಶೋಧನೆಯು ಚಿಂತನಶೀಲತೆ ಮತ್ತು ಭಾವನಾಮಯತೆ, ಬುದ್ಧಿಶಕ್ತಿ ಮತ್ತು ಕಲ್ಪನಾಶಕ್ತಿ ಇವುಗಳು

ಪರಸ್ಪರ ಅನುಸಂಧಾನದ ಸಂಕೀರ್ಣಗತಿಯಲ್ಲಿ ಸಾಗುತ್ತದೆ. ಭಾಷಾ ನಡಿಗೆಯ ಜಾಯಮಾನಿಕೆಯಲ್ಲಿ ನಾದಶಕ್ತಿ ಮತ್ತು ಅರ್ಥಶಕ್ತಿಯನ್ನು ಉಪೇಕ್ಷಿಸಿ ನವ್ಯಕಾವ್ಯ ಅಸ್ತಿತ್ವವನ್ನು ಹೊಂದುವುದಿಲ್ಲ ಎಂದು ಗ್ರಹಿಸುತ್ತಾರೆ. ನವ್ಯಕಾವ್ಯದಲ್ಲಿ ಭಾಷೆಯು ಗಂಭೀರವಾದ ಚಿಂತನೆಗೆ ಹಚ್ಚುತ್ತದೆ. ಹಾಗೆ ಅದು ಸಹಜವಾದ ಮಾತಾಗುತ್ತದೆ. ನವ್ಯದಲ್ಲಿ ಚಿಂತನೆಯೆ ಪ್ರಮುಖವಾದ ಧೋರಣೆಯಾಗಿ ಕಾವ್ಯದಲ್ಲಿ ಗೋಚರಿಸುತ್ತದೆ ಎಂಬ ಅಭಿಪ್ರಾಯ ನಾಯಕರಲ್ಲಿದೆ.

ನಾಯಕರು ನವ್ಯ ಕವಿಯನ್ನು ಕುರಿತು ನವ್ಯ ಕವಿಯು ಅನುಭವವನ್ನು ತನ್ನ ವ್ಯಕ್ತಿತ್ವದ ಸಂಸ್ಕಾರದ ನಿಜದ ಬೆಳಕಿನಲ್ಲಿ ಗುಣಾತ್ಮಕ ನಿರಪೇಕ್ಷತೆಯಲ್ಲಿ ಶೋಧಿಸುತ್ತಾನೆ. ಆ ಗುಣಾತ್ಮಕ ಪ್ರಕ್ರಿಯೆಯಲ್ಲಿ ಅವನ ವ್ಯಕ್ತಿತ್ವದ ಉದಾತ್ತತೆ, ಔನ್ನತ್ಯಗಳನ್ನು ಮಾತ್ರ ಶೋಧಿಸುವುದಿಲ್ಲ, ದೌರ್ಬಲ್ಯ, ಸಣ್ಣತನಗಳನ್ನು ಕುರಿತ ಅರಿವು ಸಹ ವಿಸ್ತರಿಸುತ್ತದೆ ಎಂಬುದನ್ನು ವಿವರಿಸುತ್ತಾರೆ.

ನವ್ಯಕಾವ್ಯದಲ್ಲಿ ಉದಾತ್ತ–ಅಲ್ಪ, ಶ್ರದ್ಧೆ–ಸಂದೇಹ, ಉಲ್ಲಾಸ–ಆತಂಕ ಹೀಗೆ ಮನಸ್ಸಿನ ಭಿನ್ನ ಅವಸ್ಥೆಗಳ ಮೇಲಾಟಗಳ ಪ್ರಕ್ರಿಯೆಯಲ್ಲಿ ತನ್ನ ಅನುಭವದ ನಿಜದ ನೆಲೆಯನ್ನು ಹುಡುಕುತ್ತಿರುವ ಪ್ರಜ್ಞಾವಂತ ವ್ಯಕ್ತಿಯ ಬಿಂಬ ಮೂಡುತ್ತದೆ ಎಂದು ನವ್ಯಕಾವ್ಯದ ಸ್ವರೂಪವನ್ನು ನಾಯಕರು ಗ್ರಹಿಸುತ್ತಾರೆ.

ಕನ್ನಡ ಕಾವ್ಯ ಪರಂಪರೆಯ ಹಿನ್ನಲೆಯಲ್ಲಿ ಗಮನಿಸಿದಾಗ ಚಿಂತನೆಪರ ಕಾವ್ಯರಾಶಿ ನವ್ಯ ಸಂದರ್ಭದಲ್ಲಿ ಹೊಸತು ಬಗೆಯವು. ನಾಯಕರು ಈ ಹೊಸತು ಬಗೆಯ ಕಾವ್ಯಗಳಿಗೆ ಪ್ರಭಾವಗೊಂಡು ನವ್ಯ ಸಾಹಿತ್ಯದ ಬಗೆಗೆ ಅತಿಹೆಚ್ಚು ಒಲವನ್ನಿಟ್ಟುಕೊಂಡವರು. ನಾಯಕರಿಗೆ ನವ್ಯಕಾವ್ಯ, ಕತೆ, ಕಾದಂಬರಿ, ನಾಟಕ, ವಿಮರ್ಶೆ ಎಲ್ಲವೂ ಸಹ ಏಕಕಾಲದಲ್ಲಿ ಚರ್ಚಿಸುವ ಸಮಗ್ರತೆ ಇದೆ. ಇದರಿಂದಾಗಿಯೆ ನಾಯಕರು ಇಡೀ ಕನ್ನಡ ಸಾಹಿತ್ಯ ಪರಂಪರೆಯನ್ನು ಸಂಕ್ಷಿಪ್ತಗೊಳಿಸಿ ಬೌದ್ಧಿಕವಾಗಿ ಸಮಗ್ರತೆಯನ್ನು ಕಾಯ್ದುಕೊಳ್ಳುತ್ತಾರೆ.

ನವೋದಯ ಮತ್ತು ನವ್ಯದ ನಡುವೆ 'ಸಮನ್ವಯ ಕಾವ್ಯ' ಅಥವಾ 'ಸಮನ್ವಯ ಪಂಥ' ಎಂದು ಕರೆಯುವ ಸಾಹಿತ್ಯ ಪಂಥವೊಂದು ಬೆಳೆದದ್ದನ್ನು ನಾಯಕರು ಗುರುತಿಸುತ್ತಾರೆ. ಜಿ.ಎಸ್. ಶಿವರುದ್ರಪ್ಪ ಮತ್ತು ಚೆನ್ನವೀರ ಕಣವಿ ಕಾವ್ಯಗಳನ್ನು ಅವರು ಈ ರೀತಿ ಕರೆದಿದ್ದಾರೆ. ನಾಯಕರು ಇವರ ಕಾವ್ಯಗಳನ್ನು 'ಮೈನರ್' ಕವಿಯ ಮಟ್ಟದವೆಂದು ಗ್ರಹಿಸುತ್ತಾರೆ. ಇವರಿಂದ ಗಟ್ಟಿಯಾದ ಸಾಹಿತ್ಯ ಸಂಪ್ರದಾಯವನ್ನು ನಿರ್ಮಿಸಲಾಗಲಿಲ್ಲ. ಎಸ್.ಎಲ್. ಭೈರಪ್ಪ ನವರನ್ನು ಈ ಹಂತದಲ್ಲೆ ಗುರುತಿಸುತ್ತಾರೆ. ಇವರ ಸಾಹಿತ್ಯದಲ್ಲಿ ಸೃಜನಶೀಲ ಅನುಭವದೊಂದಿಗೆ ಕಲಾತ್ಮಕ ತೀವ್ರತೆಯಲ್ಲಿ ತನ್ಮಯವಾಗುವ ಶಕ್ತಿ ಉನ್ನತ ಮಟ್ಟದಲ್ಲಿ ಇವರಿಗೆ ಇದ್ದಂತೆ ತೋರುವುದಿಲ್ಲ ಎಂದು ಗ್ರಹಿಸುತ್ತಾರೆ.

'ಸಮನ್ವಯ ಪಂಥ'ದ ಬಗೆಗೂ ನಾಯಕರು ಪ್ರತಿಕ್ರಿಯಿಸುತ್ತಾರೆ. ಆ ಸಾಹಿತ್ಯದ ಸೃಜನಶೀಲತೆ ಮತ್ತು ಅನುಭವ ನೆಲೆಯಿಂದ ಹುಟ್ಟಿದ ಕಾವ್ಯ ಸಂಪ್ರದಾಯವನ್ನು ಗುರುತಿಸುತ್ತಾರೆ. ವಾಸ್ತವ ಮಾರ್ಗದಲ್ಲಿ ಎಲ್ಲಾ ಕಾಲಘಟ್ಟಕ್ಕೂ ಪ್ರತಿಸ್ಪಂದಿಸುತ್ತಿರುವುದನ್ನು ನಾಯಕರು ಸೂಕ್ಷ್ಮವಾಗಿ ಗ್ರಹಿಸುತ್ತಾರೆ.

## ೪.೫ ನವ್ಯೋತ್ತರ ಸಾಹಿತ್ಯ

ಜಿ.ಎಚ್. ನಾಯಕರು ನವ್ಯೋತ್ತರ ಸಂದರ್ಭದಲ್ಲಿ ಬರೆಯುವ ಶೂದ್ರ, ದಲಿತ, ಮಾರ್ಕ್ಸಿಸ್ಟ್ ಧೋರಣೆಯ ಸಾಹಿತ್ಯವನ್ನು ಈ ಹೆಸರಿನಿಂದ ಗುರುತಿಸುತ್ತಾರೆ. ಅಡಿಗರ ನವ್ಯ ಸಾಹಿತ್ಯದ ಮಾರ್ಗದಲ್ಲಿ ಬರೆಯುತ್ತಿದ್ದ ಬ್ರಾಹ್ಮಣೇತರ ಸಾಹಿತಿಗಳು ನವ್ಯ ಸಾಹಿತ್ಯವನ್ನು, ಬ್ರಾಹ್ಮಣ ಅನುಭವಗಳನ್ನು ಪ್ರಶ್ನಿಸಿ ಹೊಸ ಸಾಹಿತ್ಯ ಪರಂಪರೆಯನ್ನು ಹುಟ್ಟುಹಾಕಿದರು. ಅದೇ ನವ್ಯೋತ್ತರ ಸಾಹಿತ್ಯ. ನವ್ಯೋತ್ತರ ಸಾಹಿತ್ಯವನ್ನು 'ಬದ್ಧ ಸಾಹಿತ್ಯ'ವೆಂದು ನಾಯಕರು ಗ್ರಹಿಸುತ್ತಾರೆ.

ಜೈನ, ವೀರಶೈವ, ಬ್ರಾಹ್ಮಣ ಸಾಹಿತ್ಯಗಳೆಲ್ಲವು ಧಾರ್ಮಿಕತತ್ವ ಪ್ರಣಾಳಿಕೆಗಳ ಚೌಕಟ್ಟಿನಲ್ಲಿ ಕಾವ್ಯ ರಚಿಸಿದ್ದರಿಂದ ಅವು ಧರ್ಮಕ್ಕೆ ಬದ್ಧವಾಗಿಯೇ ಕವಿಪ್ರತಿಭೆ ಅರಳಿದೆ. ನವೋದಯ ಸಹ 'ಹಿಂದೂ ಧರ್ಮ' ಅಥವಾ 'ಭಾರತೀಯತೆ' ದೃಷ್ಟಿಕೋನಗಳಿಂದಲೇ ರಚಿತವಾದದ್ದು. ನವ್ಯದಲ್ಲಿ ಅಡಿಗರು ಸಹ ಹಿಂದುತ್ವ, ಬ್ರಾಹ್ಮಣಿಕೆ, ಆಧ್ಯಾತ್ಮಿಕ, ನೈತಿಕ ಮೌಲ್ಯದ ನೆಲೆಯಲ್ಲಿಯೆ ಕಾವ್ಯರಚಿಸಿದ್ದು. ಹೀಗೆ ಸ್ಥೂಲವಾಗಿ ಗಮನಿಸಿಯೇ ನಾಯಕರು ನವ್ಯೋತ್ತರದ ಶೂದ್ರ, ದಲಿತ, ಮಾರ್ಕ್ಸಿಸ್ಟ್ ಸಾಹಿತ್ಯವನ್ನು ಬದ್ಧ ಸಾಹಿತ್ಯ ಎಂದು ಗ್ರಹಿಸುತ್ತಾರೆ.

ಪೂರ್ಣಚಂದ್ರ ತೇಜಸ್ವಿ, ಪಿ.ಲಂಕೇಶ್, ಚಂದ್ರಶೇಖರ್ ಪಾಟೀಲ ಮೊದಲಾದ ಬ್ರಾಹ್ಮಣೇತರರು ನವ್ಯ ಸಾಹಿತ್ಯವನ್ನು ವಿರೋಧಿಸಿದರು. ಶೂದ್ರ ಸಾಹಿತ್ಯವನ್ನು ಹುಟ್ಟುಹಾಕಿದರು. ತೇಜಸ್ವಿಯವರು "ಭಾರತದಲ್ಲಿ 'ರಿಲಿಜಿಯಸ್' ಆಗುವ ಕವಿ ಜನತಾದ್ರೋಹಿಯಾಗುತ್ತಾನೆ. ಏಕೆಂದರೆ ಭಾರತದ ಬಹುಪಾಲು ಧರ್ಮಗಳೆಲ್ಲ ಮಾನವೀಯತೆಗೆ ವಿರೋಧಿಗಳಾಗಿವೆ.೩" ಎಂದು 'ಹೊಸದಿಗಂತದೆಡೆಗೆ' ಎಂಬ 'ಅಬಚೂರಿನ ಪೋಸ್ಟ್ ಆಫೀಸ್' ಕಥಾಸಂಕಲನದ ಮುನ್ನುಡಿಯಲ್ಲಿ ನವ್ಯ ಸಾಹಿತ್ಯವನ್ನು ವಿರೋಧಿಸಿ ಶೂದ್ರಸಾಹಿತ್ಯದ ತುರ್ತನ್ನು ಘೋಷಿಸುತ್ತಾರೆ. ಈ ಸಂಕಲನವು ೧೯೭೩ ರಲ್ಲಿ ಪ್ರಕಟವಾಗಿದೆ. ಅದೇ ಸಂದರ್ಭದಲ್ಲಿ ಜಿ.ಎಚ್.ನಾಯಕರು "ಲಂಕೇಶ್, ತೇಜಸ್ವಿ ಯವರಿಗೆ ತಮ್ಮ ಸಾಹಿತ್ಯವನ್ನು ಒಳಗೊಂಡ ನವ್ಯಸಾಹಿತ್ಯದ ಬಗೆಗೆ ಅದರ ಒಳಗೆ ಬಂದಿರುವ ಅನುಭವ ಸಂಕೋಚದ ಬಗೆಗೆ ಅತೃಪ್ತಿ ಹುಟ್ಟಿರಬಹುದು" ಎಂಬ ಗ್ರಹಿಕೆಯ ನೆಲೆಯೊಳಗೆ ನಾಯಕರು ನವ್ಯ ಸಾಹಿತ್ಯವನ್ನು ಸಮರ್ಥಿಸಿಕೊಳ್ಳುತ್ತಾರೆ. ಆದರೆ ಮತಧರ್ಮದ, ಆಧ್ಯಾತ್ಮಿಕ ನೆಲೆಯ

ಹಿಂದೂತ್ವದ ಯಾವುದೇ ಸ್ವರೂಪದ ಸಾಹಿತ್ಯದ ಬಗೆಗೆ ಶೂದ್ರರಿಗೆ ಜಿಜ್ಞಾಸೆ ಇದೆ ಎಂದು ಗ್ರಹಿಸಬಹುದು ಎನಿಸುತ್ತದೆ.

"ದಲಿತ ಸಾಹಿತ್ಯವನ್ನು ಸಾಹಿತ್ಯಿಕ ದೃಷ್ಟಿಯಿಂದ ಶ್ರೇಷ್ಠ ಎಂದು ಒಪ್ಪಿಕೊಳ್ಳಲು ನಾಯಕರು ಆಲೋಚಿಸುತ್ತಾರೆ. 'ದಲಿತಾನುಭವ'ಸಾಮಗ್ರಿ ಮತ್ತು 'ಮನುಷ್ಯಾನುಭವ'ದ ಸಂದರ್ಭವನ್ನು ಕಲಾತ್ಮಕವಾಗಿ ಅಭಿವ್ಯಕ್ತಿಸಲು 'ದಲಿತ' ನೆಲೆಯೇ ಸೂಕ್ತ. ಆ ಸಂವೇದನೆಯಿಂದಲೇ ಕೃತಿರಚನೆ ಮಾಡಿದಾಗ 'ದಲಿತ ಸಾಹಿತಿ'ಯಾಗಿ ಅವನು ಕಾಣುವುದಿಲ್ಲ. ಸಾಹಿತಿಯಾಗಿ ಮಾತ್ರ ಕಾಣುತ್ತಾನೆ, ದಲಿತ ಜೀವನಾನುಭವದ ನೆಲೆಯಿಂದಲೇ ಸಾಹಿತ್ಯ ರಚನೆ ಮಾಡುವಾಗ ಕನ್ನಡ ಸಾಹಿತ್ಯದ ಅನುಭವ ಕ್ಷೇತ್ರಕ್ಕೆ ಹೆಚ್ಚಿನ ವ್ಯಾಪ್ತಿ ಮತ್ತು ಆಯಾಮವನ್ನು ರೂಢಿಸಬಲ್ಲವನಾಗುತ್ತಾನೆ. ಇದು ದೇವನೂರ ಮಹಾದೇವರ ಸೃಜನಶೀಲ ಬರಹಗಳಲ್ಲಿ ಈಗಾಗಲೇ ಕಾಣಿಸಿಕೊಳ್ಳುತ್ತಲಿದೆ. ೬" ಎಂದು ದಲಿತ ಸಾಹಿತ್ಯವನ್ನು ನಾಯಕರು 'ದಲಿತ ಸಾಹಿತಿ' ಯ ರಚನೆಯಾಗಿ ನೋಡುತ್ತಿಲ್ಲ, ಬರೀ 'ಸಾಹಿತಿ'ಯ ರಚನೆಯಾಗಿ ಮಾತ್ರ ಗಮನಿಸುತ್ತಾರೆ.

ಬಂಡಾಯ ಕಾವ್ಯವು ಇಡಿಯಾಗಿ ಜನಪರ ಕಾವ್ಯವಾಗಿಯೇ ಬೆಳೆಯುತ್ತದೆ ಬಂಡಾಯ ದವರು ಕಾವ್ಯವನ್ನು ಸಮಾನತೆಯ ಕೇಂದ್ರ ಮೌಲ್ಯವಾಗಿ ಉಳ್ಳ ಹೋರಾಟದ ಖಡ್ಗವಾಗಿಸಿಕೊಂಡು ಮುಂದುವರಿದದ್ದನ್ನು ನಾಯಕರು ಸಾಹಿತ್ಯದಲ್ಲಿ ಮನುಷ್ಯ ಮತ್ತು ಸಮಾಜ, ಮನುಷ್ಯ ಮತ್ತು ಸಮಾನತೆಯ ರೂಹು ಬಂಡಾಯದಲ್ಲಿ ಅತಿ ಗಾಢವಾಗಿ ಬೆಸೆದುಕೊಂಡಿತು ಎನ್ನುತ್ತಾರೆ. ಬಂಡಾಯ ಕಾವ್ಯವು ನವೋದಯ ಮತ್ತು ನವ್ಯ ಕಾವ್ಯಗಳ ಅಭಿವ್ಯಕ್ತಿ ಸಂಬಂಧವಾದ ಕಾವ್ಯ ತತ್ವವನ್ನು ಸ್ವೀಕರಿಸಿದೆ. ಆದರೆ ಭಾವಪರ ಮತ್ತು ಚಿಂತನಪರ ಕಾವ್ಯಗಳ ಅನುಭವ ಸಂಬಂಧವಾದ ಕಾವ್ಯತತ್ವವನ್ನು ನಿರಾಕರಿಸಿ ಅಭಿವ್ಯಕ್ತಿಸುತ್ತದೆ ಎಂದು ಅದರ ಕಾವ್ಯ ಸಂಬಂಧವಾದ ಮಾಧ್ಯಮವನ್ನು ನಾಯಕರು ಗ್ರಹಿಸುತ್ತಾರೆ.

ಬಂಡಾಯ ಕಾವ್ಯದ ಗುಣಾತ್ಮಕ ಆಯಾಮದ ಸೂಚನೆಯನ್ನು ನಾಯಕರು ಹೇಳುತ್ತಾರೆ. ಸ್ವಾತಂತ್ರ್ಯ, ಸಮಾನತೆ, ಮಾನವೀಯ ನ್ಯಾಯ, ಶೋಷಣಾರಹಿತ ಸ್ಥಿತಿ–ಇವುಗಳ ಬಗ್ಗೆ ಮೂಲತಃ ಮೌಲ್ಯದರ್ಶಗಳನ್ನು ಬಿಂಬಿಸುವುದನ್ನು ಬಂಡಾಯ ವಿರೋಧಿಸುತ್ತದೆ ಬಂಡಾಯ ಕವಿಗಳು ಜನಪರ ಮೌಲ್ಯಾದರ್ಶದ ಪರಿಗ್ರಹಿಕೆಯಲ್ಲಿಯೆ ಇರುವ ಇಂಥ ಸಮಸ್ಯೆಯನ್ನು ಗಂಭೀರವಾಗಿ ಗುರುತಿಸಿ ಮುಂದುವರಿಯಬೇಕೆಂಬ ಸಲಹೆಯನ್ನು ನಾಯಕರು ನೀಡುತ್ತಾರೆ. 'ಪ್ರಶ್ನೆ', 'ಕರಾವಳಿಯಲ್ಲಿ ಗಂಗಾಲಗ್ನ', 'ಸುಂಟರಗಾಳಿ', 'ಶಂಬುಕ', 'ಮಾಯಾರಣ್ಯ' ಇಂಥ ಕವನಗಳಲ್ಲಿ ಮನುಷ್ಯನನ್ನು ಕಾಣುವ ಅಗತ್ಯದ ಅರಿವು ಜನಪರ ಮೌಲ್ಯಾದರ್ಶ ಕೂಡುತ್ತಿರುವುದು ಕಾಣುತ್ತದೆ ಎನ್ನುತ್ತಾರೆ. ಈ

ಮೂಲಕ ಬಂಡಾಯ ಸಾಹಿತ್ಯವು 'ಜನಪರ ಸಾಹಿತ್ಯ' ಆಗುವ ಸ್ಥಿತಿಯ ಬಿಕ್ಕಟ್ಟುಗಳನ್ನು ಗ್ರಹಿಸಿ ನಾಯಕರು ಚಿಕಿತ್ಸಕ ಮನೋಭಾವವನ್ನು ವ್ಯಕ್ತಪಡಿಸುತ್ತಾರೆ. ನವ್ಯೋತ್ತರ ಸಂದರ್ಭದಲ್ಲಿನ ಶೂದ್ರ ಸಾಹಿತ್ಯ, ದಲಿತ ಸಾಹಿತ್ಯ, ಮಾರ್ಕ್ಸಿಸ್ಟ್ ಸಾಹಿತ್ಯವನ್ನು ನಾಯಕರು ಹೀಗೆ ಸೂಕ್ಷ್ಮವಾಗಿ ಗ್ರಹಿಸುತ್ತಾರೆ. ಆ ಸೂಕ್ಷ್ಮತೆಯಿಂದಲೆ ಇವು ಬದ್ಧ ಸಾಹಿತ್ಯಗಳೆಂದು ಹೇಳುತ್ತಾರೆ. ಮೌಲ್ಯಾದರ್ಶ, ಜನಪರ ಕಾವ್ಯ, ತನ್ನ ಹಿಂದಿನ ಪರಂಪರೆ ಗೇಯತೆಯ ಸ್ವೀಕರಣ, ಚಿಂತನ ಮತ್ತು ಭಾವಪರ ಕಾವ್ಯಗಳ ವಿರೋಧ, ಅನುಭವ ಶೋಧ, ಮನುಷ್ಯ ಮತ್ತು ಸಮಾಜ, ಮನುಷ್ಯ ಮತ್ತು ಸಮಾನತೆ ಈ ಧೋರಣೆಗಳನ್ನು ನವ್ಯೋತ್ತರ ಸಂದರ್ಭದ ಸಾಹಿತ್ಯದಲ್ಲಿ ನಾಯಕರು ಗ್ರಹಿಸುತ್ತಾರೆ. ನವ್ಯೋತ್ತರ ಸಾಹಿತ್ಯವು ತನ್ನ ಹಿಂದಿನ ಪರಂಪರೆಯ ಮೌಲ್ಯಗಳನ್ನು ತೂಗಿನೋಡಿ ಕ್ರಿಯಾತ್ಮಕವಾಗುತ್ತದೆ ಎಂಬುದನ್ನು ಗ್ರಹಿಸಬಹುದು.

ಪ್ರಾಚೀನ ಸಾಹಿತ್ಯದಿಂದ ನವ್ಯೋತ್ತರ ಸಾಹಿತ್ಯದವರೆಗೂ ಇಡೀ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಆದ ಗತಿ-ವಿನ್ಯಾಸಗಳನ್ನು ನಾಯಕರು ಗ್ರಹಿಸುತ್ತಾರೆ. ಮತಧರ್ಮ ಪರವಾದ ಸಾಹಿತ್ಯ, ಭಾವಪರ, ಚಿಂತನಪರ, ಜನಪರ ಸಾಹಿತ್ಯ ಎಂದು ಗುರುತಿಸಿಕೊಂಡು ವಿಶ್ಲೇಷಿಸಿದ ಬಗೆ ಇದೆ. ವಸ್ತು, ಅನುಭವ, ಅಭಿವ್ಯಕ್ತಿ, ಸೃಜನಶೀಲತೆಯಲ್ಲಿ ಯಾವ ಸಾಹಿತ್ಯ ಪಂಥವು ಸ್ವೋಪಜ್ಞವಾಗಿದೆ ಎಂದು ಮೌಲ್ಯನಿರ್ಣಯ ಮಾಡುತ್ತಾರೆ. ಸಾಹಿತ್ಯ ಪಂಥಗಳ ಮಿತಿಗಳನ್ನು ಗುರುತಿಸುತ್ತಾರೆ. ಅವು ಮುಂದೆ ಕೈಗೊಳ್ಳಬೇಕಾದ ಸಾಹಿತ್ಯ ಚಿಂತನೆಯ ತುರ್ತನ್ನು ಅಭಿವ್ಯಕ್ತಿಸುತ್ತಾರೆ. ಹೀಗೆ ನಾಯಕರು ಪರಂಪರಾಗತವಾದ ಸಾಹಿತ್ಯದ ಹರವನ್ನು ಚಾರಿತ್ರಿಕ ಪ್ರಜ್ಞೆಯಿಂದಲೆ ಅವಲೋಕಿಸಿ ಗ್ರಹಿಸುತ್ತಾರೆ.

## ಟಿಪ್ಪಣಿಗಳು:

೧. ನಾಯಕ ಜಿ.ಎಚ್, 'ನಿರಪೇಕ್ಷ', ಪುಟ-೨೦

೨. ನಾಯಕ ಜಿ.ಎಚ್, 'ಸಮಕಾಲೀನ', ಪುಟ-೪

೩. ಎಚ್. ದಂಡಪ್ಪ ಬಿ.ಎಸ್. ಸುಮಿತ್ರಬಾಯಿ(ಸಂ), 'ಸುವರ್ಣ ಸಾಹಿತ್ಯ ವಿಮರ್ಶೆ', ಪುಟ-೨೫೨

೪. ನಾಯಕ ಜಿ.ಎಚ್, 'ಅನಿವಾರ್ಯ', ಪುಟ-೨೫

ಅಧ್ಯಾಯ: ೫.

# ಜಿ.ಎಚ್. ನಾಯಕರ ವಿಮರ್ಶೆ: ವಿಶಿಷ್ಟತೆಗಳು

೫.೧. ಕೃತಿಯ ಆಯ್ಕೆ
೫.೨. ಭಾಷೆಯ ಸ್ವರೂಪ
೫.೩. ವಿಮರ್ಶಾ ಶೈಲಿ

ಜಿ.ಎಚ್. ನಾಯಕರ ವಿಮರ್ಶನ ಅರಿವು ಸಾಹಿತ್ಯ ಮಾಧ್ಯಮದಲ್ಲಿ ಪರಿಣಾಮಕಾರಿಯಾಗಿ, ಪ್ರಭಾವಶಾಲಿಯಾಗಿ ಮೂಡಿ ಬಂದಿದೆ. ಪಾಶ್ಚಾತ್ಯ ವಿಮರ್ಶೆಯ ಪರಿಕಲ್ಪನೆಗಳು ಅವರಲ್ಲಿ ಕಂಡುಬರುತ್ತವೆ. ಆದರೆ ಪಾಶ್ಚಾತ್ಯ ವಿಮರ್ಶೆಯ ಪರಿಭಾಷೆಗಳನ್ನು ಸಂದರ್ಭೋಚಿತವಾಗಿ ಬಳಸುತ್ತಾರೆ. ಕನ್ನಡ ಪ್ರಾಧ್ಯಾಪಕರಾದ ಅವರು ಪಾಶ್ಚಾತ್ಯ ನವ್ಯ ವಿಮರ್ಶೆಯ ಪ್ರಭಾವದಿಂದ ಪ್ರೇರಣೆ ಪಡೆದಿದ್ದರೂ ಅತಿಯಾಗಿ ಪ್ರಭಾವಿತಗೊಂಡಿಲ್ಲ. ಅವರೆ ಒಂದು ಕಡೆ ತಾವು ಗೋಪಾಲಕೃಷ್ಣ ಅಡಿಗ, ಕುರ್ತಕೋಟಿಯವರ ಪ್ರಭಾವದಿಂದ ಸಾಹಿತ್ಯ ವಿಮರ್ಶೆಗೆ ತೊಡಗಿದವರು ಎಂದು ಹೇಳುತ್ತಾರೆ. ನಾಯಕರು ಸಾಹಿತ್ಯ ಕೃತಿಯೊಂದನ್ನು ವಿಮರ್ಶಿಸುವ ಸಂದರ್ಭದಲ್ಲಿ ಪಾಶ್ಚಾತ್ಯ ಚಿಂತಕರ ಮತ್ತು ಸೃಜನಶೀಲ ಬರಹಗಾರರ ಕಡೆ ಹೆಚ್ಚು ಒತ್ತುಕೊಟ್ಟು ಹೆಸರಿಸುವುದಿಲ್ಲ. ಯು.ಆರ್. ಅನಂತಮೂರ್ತಿ, ಎಂ.ಜಿ.ಕೃಷ್ಣಮೂರ್ತಿಯವರಂತೆ ವಿಮರ್ಶೆಯಲ್ಲಿ ಸಾರ್ತ್ರ್, ಕಾಫ್ಕಾ, ಕಾಮು, ಜಾಯ್ಸ್ ಸಂದರ್ಭೋಚಿತವಾಗಿ ಬಳಸಿಕೊಂಡು ಕನ್ನಡದಲ್ಲಿ ವಿಮರ್ಶೆಯನ್ನು ಮಾಡುವುದಿಲ್ಲ. ನಾಯಕರಲ್ಲಿ ಕನ್ನಡ ಸಾಹಿತ್ಯ ಪರಂಪರೆಯ ದೃಷ್ಟಿಕೋನದ ನೆಲೆಯಲ್ಲಿ ಸಾಹಿತ್ಯ ಕೃತಿಯನ್ನು ಅವಲೋಕಿಸುತ್ತಾರೆ.

ಜಿ. ಎಚ್ ನಾಯಕರು ತಮ್ಮ ವಿಮರ್ಶೆಯಲ್ಲಿ ಪಾಶ್ಚಾತ್ಯ ಪರಿಕಲ್ಪನೆಗಳ ವಿಮರ್ಶಾ ವಿಧಾನಗಳ ಹಾಗೂ ಸಾಹಿತ್ಯ ಪಂಥಗಳ ಬಗೆಗಿನ ಗ್ರಹಿಕೆಗಳನ್ನು ಕುರಿತಂತೆ ಹಲವು ಆಯಾಮಗಳಲ್ಲಿ ಬಳಸುತ್ತಾರೆ. ಎಂಬುದನ್ನು ಇದುವರೆಗಿನ ಅಧ್ಯಯನದಲ್ಲಿ ಗಮನಿಸಲಾಗಿದೆ. ಹೀಗೆ ಬಳಸುವಾಗ ನಾಯಕರು ಮೂಲತಃ ಸಾಹಿತ್ಯ ಕೃತಿಯ ಒಳವಿವರಗಳ ಮೂಲಕವೇ ವಿಮರ್ಶೆ ಕೈಗೊಳ್ಳುತ್ತಾರೆ. ಆ ಸಂದರ್ಭದಲ್ಲಿ ಇವರ ವಿಮರ್ಶೆಯಲ್ಲಿ ಅನೇಕ ಬಗೆಯ ವಿಶಿಷ್ಟತೆಗಳನ್ನು ಗುರುತಿಸಬಹುದು. ಇವರ ವಿಶಿಷ್ಟತೆಯ ಬಗ್ಗೆ ಚರ್ಚಿಸುವಾಗ ನಾಯಕರು ವಿಮರ್ಶೆಗೆ ತೊಡಗಿಕೊಂಡಾಗ ಎಂತಹ ಕೃತಿಯನ್ನು ಆಯ್ಕೆ ಮಾಡಿಕೊಳ್ಳುತ್ತಾರೆ? ಅವರು ವಿಮರ್ಶೆಯಲ್ಲಿ ಬಳಸುವ ಭಾಷೆಯ ಸ್ವರೂಪ ಎಂಥಹದ್ದು? ನಾಯಕರ ವಿಮರ್ಶಾ ಶೈಲಿ ಯಾವ ಬಗೆಯದ್ದು? ಮತ್ತು ಕೃತಿಯ ಬಗೆಗಿನ ವಿಮರ್ಶಾ ನಿರ್ಧಾರಗಳೇನು? ಎನ್ನುವ ಪ್ರಶ್ನೆಗಳು ಸಹಜವಾಗಿ ಏಳುತ್ತವೆ. ನಾಯಕರು ಸಾಹಿತ್ಯ ಕೃತಿಯನ್ನು ವಿಮರ್ಶೆಗೆ ಒಳಪಡಿಸುವಾಗ ಕೃತಿಯ ಆಯ್ಕೆಯ ವಿಷಯದಲ್ಲಿ ವಿಶೇಷವಾಗಿ ಗಮನ ಹರಿಸುತ್ತಾರೆ. ಕೃತಿಯನ್ನು ಅವರು ಅವಲೋಕಿಸುವಾಗ ಕೃತಿಯ ಭಾಷೆಗೆ ಒತ್ತುಕೊಡುವಷ್ಟೆ ತಮ್ಮ ವಿಮರ್ಶೆಯ ಪರಿಭಾಷೆಗೂ ಒತ್ತು ನೀಡುತ್ತಾರೆ. ವಿಮರ್ಶಾಶೈಲಿ ಮತ್ತು ನಿರ್ಧಾರಗಳ ಬಗೆಯಲ್ಲೂ ಸಾಹಿತ್ಯ ವಿಮರ್ಶೆಗೆ ಕಾಳಜಿ ಪೂರ್ವಕವಾಗಿ ಒತ್ತು ನೀಡಿ ವಿಮರ್ಶೆಯ ಕಾರ್ಯದಲ್ಲಿ ತೊಡಗುತ್ತಾರೆ.

## ೫.೧ ಕೃತಿಯ ಆಯ್ಕೆ

ಜಿ.ಎಚ್. ನಾಯಕರು ವಿಮರ್ಶೆಯಲ್ಲಿ ಕೃತಿಯ ಆಯ್ಕೆ ಮತ್ತು ಕವಿಗಳಿಗೆ ಸಂಬಂಧಿಸಿದಂತೆ ವಿಶೇಷ ಒತ್ತುಕೊಟ್ಟು ವಿಮರ್ಶಿಸುವುದು ಕಾಣುತ್ತದೆ. ನಾಯಕರು 'ಮೈನರ್' ಕವಿಗಳನ್ನು, ಲೇಖಕರನ್ನು ತಮ್ಮ ವಿಮರ್ಶೆಯೊಳಗೆ ಗಾಢವಾಗಿ ಚರ್ಚಿಸುವುದಿಲ್ಲ. 'ಮೇಜರ್' ಕವಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡೇ ಅವರ ಕೃತಿಗಳನ್ನು ವಿಮರ್ಶೆಗೆ ಒಳಪಡಿಸುತ್ತಾರೆ. ಹಾಗೆ ಮಾಡುವಾಗ ಮುಖ್ಯವಾದ ಕೃತಿಗಳನ್ನು ಮಾತ್ರ ಆಯ್ಕೆ ಮಾಡಿಕೊಂಡು ಆ ಕೃತಿಯನ್ನು ಪರಂಪರೆಯ ಹಿನ್ನೆಲೆಯಲ್ಲಿ ಅವಲೋಕಿಸುತ್ತಾರೆ. ಉದಾ ಪಂಪನ 'ವಿಕ್ರಮಾರ್ಜುನ ವಿಜಯಂ', ರಾಘವಾಂಕನ 'ಹರಿಶ್ಚಂದ್ರ ಕಾವ್ಯ', ರನ್ನನ 'ಸಾಹಸ ಭೀಮ ವಿಜಯಂ' ಇತ್ಯಾದಿ.

ಪ್ರಾಚೀನ ಸಾಹಿತ್ಯದ ಜೈನ, ವೀರಶೈವ, ಬ್ರಾಹ್ಮಣ ಸಾಹಿತ್ಯ ಕವಿ ಮತ್ತು ಕೃತಿಗಳ ಬಗ್ಗೆ ನಾಯಕರು ವಿಶ್ಲೇಷಿಸುತ್ತಾರೆ. ಇವುಗಳಲ್ಲಿ ಜೈನ ಸಾಹಿತ್ಯದ ಪಂಪ, ರನ್ನ, ರತ್ನಾಕರವರ್ಣಿಯ ಕೃತಿಗಳ ಬಗ್ಗೆ ಸೂಕ್ಷ್ಮವಾಗಿ ವಿವರಿಸುತ್ತಾರೆ. ಆಗ ಕೃತಿಯೊಂದರ ಬಗ್ಗೆ ಮಾತನಾಡುವಾಗ ಆ ಕಾಲಘಟ್ಟದ ಸೃಜನಶೀಲ, ಸ್ವೋಪಜ್ಞತೆಯ ಕವಿ ಮತ್ತು ಕಾವ್ಯವನ್ನು ಕುರಿತು ಚರ್ಚಿಸುತ್ತಾರೆ. ಆ ಕಾಲದ ಅಭಿವ್ಯಕ್ತಿ ಕ್ರಮವಾದ ಲೌಕಿಕ ಮತ್ತು ಧಾರ್ಮಿಕ ಕಾವ್ಯ ಪದ್ಧತಿಗಳನ್ನು ಅನುಸರಿಸಿ ಬರೆದಿದ್ದರ ಬಗ್ಗೆ ಚರ್ಚಿಸುತ್ತಾರೆ. ಹೀಗೆ ಚರ್ಚಿಸುವಾಗ ಪಂಪ, ರನ್ನ ಕೃತಿಗಳನ್ನು ಬಿಟ್ಟು; ಉಳಿದ ಕವಿಗಳ ಬಗ್ಗೆ ಮತ್ತು ಅವರ ಕೃತಿಗಳ ಬಗ್ಗೆ ಚರ್ಚೆಯ ಗೌಣತೆ ಕಂಡುಬರುತ್ತದೆ. ನಾಯಕರು ಒಂದು ಸಂಪ್ರದಾಯದ ಹುಟ್ಟಿಗೆ ಕಾರಣವಾದ ಕವಿಗಳನ್ನು ಮಾತ್ರ ಗಮನಿಸುತ್ತಾರೆ. ಆಗ ಈ ರೀತಿಯಾದ ಕೃತಿಯ ಆಯ್ಕೆಯನ್ನು ನಿರ್ಧರಿಸುತ್ತಾರೆ ಎನಿಸುತ್ತದೆ. ಸಮಕಾಲೀನ ವಿಮರ್ಶಕರು ಮತ್ತು ಮೊದಲ ತಲೆಮಾರಿನ ವಿಮರ್ಶಕರು ಪಂಪ, ರನ್ನರ ಬಗೆಗೆ ಹೆಚ್ಚು ಚರ್ಚೆ ಮಾಡಿದ್ದಾರೆ. ಈ ಚರ್ಚೆಯ ಸಂದರ್ಭದಲ್ಲೂ ನಾಯಕರು 'ಮೇಜರ್' ಎನ್ನಬಹುದಾದ ವಿಮರ್ಶೆಯ ಲೇಖನಗಳನ್ನು ಗಮನಿಸುತ್ತಾರೆ ಡಿ.ಎಲ್. ನರಸಿಂಹಾಚಾರ್, ಸಿ.ಪಿ.ಕೆ, ರಂ.ಶ್ರೀ ಮುಗಳಿ ಪೋಲಂಕಿ ರಾಮಮೂರ್ತಿ, ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಮೊದಲಾದವರ ಲೇಖನಗಳನ್ನು ಚರ್ಚಿಸಿ ತಮ್ಮ ವಿಮರ್ಶೆಯ ನಿರ್ಧಾರಗಳನ್ನು ಕೈಗೊಳ್ಳುತ್ತಾರೆ. ಈ ಚರ್ಚೆಯ ಸಾಧ್ಯತೆ ಮತ್ತು ಸಮಸ್ಯೆಗಳನ್ನು ಗುರುತಿಸಿಕೊಂಡು ಮೌಲ್ಯನಿರ್ಣಯಿಸಲು ಈ ರೀತಿಯ ಆಯ್ಕೆ ನಾಯಕರಿಗೆ ಅನಿವಾರ್ಯ ಎನಿಸಿರಬೇಕು. ಅಥವಾ ಇದೊಂದು ಅವರ ವಿಮರ್ಶೆ ಕಾಳಜಿಯೂ ಆಗಿರಬಹುದು.

ವೀರಶೈವದ ವಚನ ಸಾಹಿತ್ಯದ ಸಂದರ್ಭದಲ್ಲಿ ಬಸವಣ್ಣನಲ್ಲಿನ ಕಾವ್ಯಾತ್ಮಕ ಗುಣ, ಅಲ್ಲಮ ಪ್ರಭುವಿನ ವಚನಗಳಲ್ಲಿ ಪ್ರವಾದಿದನಿ, ಅಕ್ಕಮಹಾದೇವಿಯಲ್ಲಿ ಭಾವಗೀತೆಯ ಗುಣಗಳನ್ನು

ನಾಯಕರು ಗುರುತಿಸುತ್ತಾರೆ. ಅದೇ ಕಾಲದ ಸಿದ್ದರಾಮ, ಚೆನ್ನಬಸವಣ್ಣ ಮತ್ತಿತರ ವಚನಕಾರರ ಕಾವ್ಯದ ಗುಣದ ಬಗೆಗೆ ಹೇಳುವುದಿಲ್ಲ. ಆದರೆ ವಚನ ಸಾಹಿತ್ಯದ ದೃಷ್ಟಿಯಿಂದ ಇವರು ಮುಖ್ಯರೆಂದು ಗೌಣ ನೆಲೆಯಲ್ಲಿ ತೇಲಿಸಿ ನಾಯಕರು ಹೇಳುತ್ತಾರೆ. ಇಲ್ಲಿ ಜಿ.ಎಚ್. ನಾಯಕರಿಗೆ ಒಂದು ಪರಂಪರೆಯನ್ನು ಗಟ್ಟಿಯಾಗಿ ಕಟ್ಟುವ ಶಕ್ತಿ ಯಾವ ಸಾಹಿತ್ಯಕ್ಕೆ ಇರುತ್ತದೆಯೊ ಅದು ಮುಖ್ಯವಾಗಿ ಕಾಣುತ್ತದೆ. ಇಲ್ಲಿಯೂ ಅಷ್ಟೆ ಬಸವಣ್ಣ, ಅಲ್ಲಮಪ್ರಭು ಅಕ್ಕಮಹಾದೇವಿಯವರ ವಚನ ಸಾಹಿತ್ಯ ಪರಂಪರೆಯೇ ಮುಖ್ಯವಾಯಿತು. ಇಲ್ಲಿ ಜೇಡರ ದಾಸಿಮಯ್ಯ ವಚನ ಸಾಹಿತ್ಯದ ಆದ್ಯ ಪ್ರವರ್ತಕ. ಆದರೂ ಅವರನ್ನು ನಾಯಕರು ಗುರುತಿಸುವುದಿಲ್ಲ. ಈ ರೀತಿಯ ಆಯ್ಕೆ ಏಕೆ ಎಂಬ ಪ್ರಶ್ನೆಯೂ ಕೂಡ ಮುಖ್ಯವೆನಿಸುತ್ತದೆ. ಹರಿಹರ ಮತ್ತು ರಾಘವಾಂಕರು ಸಾಹಿತ್ಯಕ್ಕೆ ಹೊಸ ಸಾಹಿತ್ಯ ಪ್ರಕಾರಗಳನ್ನು ಕೊಡುಗೆಯಾಗಿ ನೀಡಿದ್ದಾರೆ. ಹೊಸ ಸಂಪ್ರದಾಯದ ಮಾರ್ಗಗಳನ್ನು ಪ್ರಚಾರ ಪಡಿಸಿದ ಕಾರಣಕ್ಕಾಗಿ ಮತ್ತು ಇವರ ಅಭಿವ್ಯಕ್ತಿ ಕ್ರಮ ಮತ್ತು ಸೃಜನಶೀಲತೆಯಲ್ಲಿ ವಿಭಿನ್ನವಾಗಿ ಸಾಹಿತ್ಯ ರಚನೆಯಾಗಿರುವುದರಿಂದ ಇವರ ಕೃತಿಗಳ ಬಗ್ಗೆ ವಿಮರ್ಶಿಸುತ್ತಾರೆ. ಈ ನೆಲೆಯಲ್ಲಿ ನಾಯಕರ 'ಹರಿಶ್ಚಂದ್ರ ಕಾವ್ಯ: ಓದು, ವಿಮರ್ಶೆ' ಕೃತಿಯು ಗಮನಾರ್ಹವಾಗಿದೆ. ವಚನ ಸಾಹಿತ್ಯ ಮತ್ತು ವೀರಶೈವ ಸಾಹಿತ್ಯವನ್ನು ಸ್ವೋಪಜ್ಞ ಸಾಹಿತ್ಯವೆಂದು ಮೌಲ್ಯೀಕರಿಸುತ್ತಾರೆ.

ಇಡೀ ಬ್ರಾಹ್ಮಣ ಸಾಹಿತ್ಯದಲ್ಲಿ ಕುಮಾರವ್ಯಾಸನ 'ಕರ್ಣಾಟ ಭಾರತ ಕಥಾಮಂಜರಿ' ಮತ್ತು ಲಕ್ಷ್ಮೀಶನ 'ಜೈಮಿನಿಭಾರತ' ಎಂಬ ಎರಡು ಕೃತಿಗಳ ಬಗೆಗೆ 'ಪ್ರಾಚೀನ ಮತ್ತು ಆಧುನಿಕ ಕನ್ನಡ ಸಾಹಿತ್ಯ : ಒಂದು ನೋಟ' ಲೇಖನದಲ್ಲಿ ನಾಯಕರು ಚರ್ಚಿಸುತ್ತಾರೆ. ಕುಮಾರವ್ಯಾಸನ 'ಕರ್ಣಾಟ ಭಾರತ ಕಥಾಮಂಜರಿ' ಯ ನಾದಗುಣ, ರೂಪ ಸಮೃದ್ಧಿ, ಖಂಡಕಾವ್ಯ, ರೋಚಕ ಸನ್ನಿವೇಶ, ಎಲ್ಲಕ್ಕೂ ಹೆಚ್ಚಾಗಿ ಆಶ್ರಯದಾತನನ್ನು ಹೊಗಳಿ ಬರೆಯುತ್ತಿದ್ದ ಕಾವ್ಯ ಪರಂಪರೆಯನ್ನು ಮುರಿದು ಕೃಷ್ಣಚರಿತೆಯನ್ನು ಬರೆದ್ದರಿಂದಲೇ ಏನೋ ನಾಯಕರು ಈ ಕೃತಿಯನ್ನು ಕುರಿತು "ಕನ್ನಡ ಧಾರ್ಮಿಕ ಸಂಪ್ರದಾಯ ಕೃತಿಗಳಿಗೆಲ್ಲ ಶ್ರೇಷ್ಠಕೃತಿ" ಎಂದು ಹೇಳಿರಬೇಕು ಎನಿಸುತ್ತದೆ. ಕುಮಾರವ್ಯಾಸನ ಈ ಕೃತಿಗೆ 'ವಿಕ್ರಮಾರ್ಜುನ ವಿಜಯ'ವೊಂದೇ ಸರಿದೊರೆಯಾದ ಕಾವ್ಯವೆಂದು ನಾಯಕರು ನಿರ್ಧರಿಸುತ್ತಾರೆ.

ಜಿ.ಎಚ್.ನಾಯಕರು ನವೋದಯ, ಪ್ರಗತಿಶೀಲ, ನವ್ಯ, ನವ್ಯೋತ್ತರ ಸಾಹಿತ್ಯ ದಲ್ಲಿಯೂ ವಿಮರ್ಶೆಗೆ ಕೃತಿ ಮತ್ತು ಕವಿಯ ಆಯ್ಕೆಯ ವಿಚಾರದಲ್ಲಿ ವಿಶೇಷ ಒತ್ತು ನೀಡುತ್ತಾರೆ. ನವೋದಯ ಸಾಹಿತ್ಯದಲ್ಲಿ ಕುವೆಂಪು, ಮಾಸ್ತಿ, ಬೇಂದ್ರೆ, ಕಾರಂತರ ಕೃತಿಗಳಷ್ಟು ಮಹತ್ತರವಾಗಿ ಬೇರೆ ಯಾವ ಕೃತಿಗಳನ್ನು ವಿಮರ್ಶೆಗೆ ಒಳಪಡಿಸುವುದಿಲ್ಲ. ಗೋವಿಂದ ಪೈ, ಡಿ.ವಿ.ಗುಂಡಪ್ಪ, ಕಡೆಂಗೋಡ್ಲು ಶಂಕರಭಟ್ಟ, ಪು.ತಿ.ನ ಮುಂತಾದವರನ್ನು ಮುಖ್ಯರೆಂದು ಗುರುತಿಸುತ್ತಾರೆ. ಅವರ ಕೃತಿಗಳನ್ನು

ಚರ್ಚೆಗೆ ಎತ್ತಿಕೊಳ್ಳುವುದಿಲ್ಲ. ಪ್ರಗತಿಶೀಲ ಸಾಹಿತ್ಯದ ಬಗೆಗೆ ವಿವರಣಾತ್ಮಕ ಅಧ್ಯಯನ ನಡೆಸುತ್ತಾರಷ್ಟೆ, ಅಲ್ಲಿ ಗಾಢವಾಗಿ ಯಾವೊಂದು ಕೃತಿಯನ್ನು ಆಯ್ಕೆ ಮಾಡಿಕೊಂಡು ಚರ್ಚಿಸುವುದಿಲ್ಲ.

ನಾಯಕರು ನವ್ಯ ಸಾಹಿತ್ಯದ ಗೋಪಾಲಕೃಷ್ಣ ಅಡಿಗ, ಯು.ಆರ್. ಅನಂತಮೂರ್ತಿ, ಕೆ.ಪಿ. ಪೂರ್ಣಂದ್ರ ತೇಜಸ್ವಿ ಮೊದಲಾದವರ ಸಾಹಿತ್ಯವನ್ನು ಚರ್ಚಿಸುತ್ತಾರೆ. ನಾಯಕರು ಅತಿಹೆಚ್ಚು ಚರ್ಚೆ ಮಾಡುವುದು ನವ್ಯ ಸಾಹಿತ್ಯವನ್ನು ಮಾತ್ರ. ಅಡಿಗರ 'ಮೋಹನ ಮುರಳಿ' ನವೋದಯ ಸಂದರ್ಭದಲ್ಲಿ ಬರೆದ ಭಾವಗೀತೆಯಾದರೂ ಅದನ್ನು ನಾಯಕರು ನವ್ಯದ ಪ್ರಾಯೋಗಿಕ ವಿಮರ್ಶೆಯ ನೆಲೆಯಿಂದ ಚರ್ಚಿಸುತ್ತಾರೆ. ಜಿ.ಎಸ್.ಎಸ್. ರವರ 'ಮಬ್ಬಿನಿಂದ ಮಬ್ಬಿಗೆ' ಗಿರೀಶ್ ಕಾರ್ನಾಡರ 'ತುಘಲಕ್', ಚದುರಂಗದ 'ಇಲಿಬೋನು', ಚದುರಂಗರ 'ವೈಶಾಖ' ಮುಂತಾದವನ್ನು ಈ ಮಾದರಿಯಲ್ಲಿಯೇ ಗಮನಿಸುತ್ತಾರೆ. ಆದರೆ ಇಲ್ಲಿ ಶ್ರೇಷ್ಠತೆಯನ್ನೆ ಮುಖ್ಯವಾಗಿಟ್ಟುಕೊಂಡು ಕೃತಿಯನ್ನು ವಿಮರ್ಶಿಸಿಲ್ಲ.

ನಾಯಕರು ಗೋಪಾಲಕೃಷ್ಣ ಅಡಿಗರ ಸಾಹಿತ್ಯವನ್ನು ಗಮನಿಸಿ, ಅವರ ಸಾಹಿತ್ಯದಲ್ಲಿ ಕುವೆಂಪು ಅವರ ಆಧ್ಯಾತ್ಮಿಕ ತುಯ್ತು, ಮಾಸ್ತಿಯವರ ಧಾರ್ಮಿಕತೆ, ಕಾರಂತರಲ್ಲಿ ಕಂಡುಬರುವ ವೈಯುಕ್ತಿಕ ಬದುಕಿನಲ್ಲಿ ದಕ್ಕುವ ವಾಸ್ತವತೆಯ ನಿಷ್ಠುರ ಪ್ರಜ್ಞೆ ಈ ಮೂರು ಅಂಶಗಳು ಸೃಜನಕ್ರಿಯೆಯಾಗಿ ಕಾಣುತ್ತವೆ ಎಂದು ನಾಯಕರು ಗುರುತಿಸುತ್ತಾರೆ. 'ಅನಂತಮೂರ್ತಿಯವರ ಕಥಾಸಾಹಿತ್ಯ', 'ತೇಜಸ್ವಿ ಸಾಹಿತ್ಯ' ಲೇಖನಗಳಲ್ಲಿ ಈ ಇಬ್ಬರೂ ಲೇಖಕರು ಸೃಜನಶೀಲ ಕೃತಿಗಳ ಬಗ್ಗೆ ನಾಯಕರು ವಿಮರ್ಶಿಸುತ್ತಾರೆ. ನವ್ಯದ ಕೃತಿಗಳ ಆಯ್ಕೆಯಲ್ಲಿ ನಾಯಕರಿಗೆ ಅತಿಯಾದ ವ್ಯಾಮೋಹವಿದೆ ಎಂದು ಇವರ ವಿಮರ್ಶೆಯ ನಿಲುವುಗಳಿಂದ ಗೋಚರಿಸುತ್ತದೆ.

ಜಿ.ಎಸ್. ಶಿವರುದ್ರಪ್ಪ ಚನ್ನವೀರ ಕಣವಿ, ಮತ್ತು ಎಸ್.ಎಲ್.ಭೈರಪ್ಪರಂತಹ ಸೃಜನಶೀಲ ಬರಹಗಾರರನ್ನು 'ಮೈನರ್' ಎಂದು ನಾಯಕರು ಗುರುತಿಸುತ್ತಾರೆ. ಈ ಕವಿಗಳಿಗೆ ಸಾಹಿತ್ಯ ಸಂಪ್ರದಾಯವೊಂದನ್ನು ನಿರ್ಮಿಸಲಾಗಲಿಲ್ಲ ಎಂಬ ಕಾರಣಕೊಟ್ಟು ಅವರದ್ದು 'ಮೈನರ್' ಬರವಣಿಗೆ ಎಂದು ಸಮರ್ಥನೆ ಕೊಡುತ್ತಾರೆ. ನವ್ಯೋತ್ತರ ಸಂದರ್ಭದಲ್ಲಿನ ಶ್ರೀ ಕೃಷ್ಣ ಆಲನಹಳ್ಳಿ ಮತ್ತು ದೇವನೂರ ಮಹಾದೇವರ ಬಗ್ಗೆ ತಮ್ಮ 'ಗುಣಗೌರವ' ಕೃತಿಯಲ್ಲಿ ನಾಯಕರು ಚರ್ಚಿಸುತ್ತಾರೆ.

ಶ್ರೇಷ್ಠ ಕೃತಿಯ ಆಯ್ಕೆ ಮತ್ತು ಕವಿಯ ಆಯ್ಕೆ ಮಾಡಿಕೊಂಡು ವಿಮರ್ಶಿಸುವುದು ನಾಯಕರ ವಿಶೇಷ. ಕೆಲವೊಮ್ಮೆ ಈ ವಿಶೇಷತೆ 'ಟಾಪ್-೧೦' ಮಾದರಿಯ ರೀತಿಯಲ್ಲಿದೆಯೇ ಎನಿಸಿಬಿಡುತ್ತದೆ. ನಾಯಕರು ಆಯಾ ಸಾಹಿತ್ಯ ಪಂಥಗಳ ಕೃತಿಗಳನ್ನು ಗ್ರಹಿಸಿಯೇ ಈ ರೀತಿಯ ಕೃತಿ ಆಯ್ಕೆ ಮಾಡುವುದು ಎಂಬುದು ಸೂಕ್ಷ್ಮ ನೋಟದಿಂದ ಸಾಧಿತವಾಗುತ್ತದೆ. ಹೀಗೆ ನಾಯಕರು

ಕೃತಿ ಮತ್ತು ಲೇಖಕನ ಆಯ್ಕೆಯ ವಿಚಾರದಲ್ಲಿ ತಮ್ಮದೇ ಆದ ವಿಮರ್ಶೆಯ ನೆಲೆಗಳನ್ನು ಅನುಸರಿಸುತ್ತಾರೆ ಎಂಬುದು ಕಂಡುಬರುತ್ತದೆ.

## ೫.೨. ಭಾಷೆಯ ಸ್ವರೂಪ

ಜಿ.ಎಚ್. ನಾಯಕರ ವಿಮರ್ಶೆಯ ಭಾಷೆಯು ನವ್ಯ ಸಾಹಿತ್ಯದ ಪರಿಭಾಷೆಯಲ್ಲಿ ರೂಪುಗೊಂಡದ್ದು. ನಾಯಕರು ಸಾಮಾನ್ಯವಾಗಿ ವಿಮರ್ಶಾತ್ಮಕ ನೆಲೆಗಳನ್ನು ಕ್ರೋಢೀಕರಿಸಿಕೊಂಡು ಅಭಿವ್ಯಕ್ತಿ ಮಾಧ್ಯಮವಾದ ಭಾಷೆಯ ಮೂಲಕ ಕೃತಿಯ ವಿಶ್ಲೇಷಣೆಯತ್ತ ಪ್ರವೇಶಿಸುತ್ತಾರೆ. ಕೃತಿಯೊಂದನ್ನು ನವ್ಯ ವಿಮರ್ಶೆಯ ಪರಿಭಾಷೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ವಿಶ್ಲೇಷಿಸುತ್ತಾರೆ. ಜೊತೆಗೆ ಭಾಷೆಯ ಬಿಗುವಿನೊಂದಿಗೆ ಚರ್ಚಿಸುತ್ತಾರೆ. ಎಲ್ಲೂ ವಿಮರ್ಶಾ ಭಾಷೆಯ ಬಿಗಿಯನ್ನು ಕಡಿಮೆ ಮಾಡುವುದಿಲ್ಲ. ನಾಯಕರು ಕೃತಿಯಲ್ಲಿ ಜರುಗುವ ಕ್ರಿಯೆಯ ಗತಿ–ವಿನ್ಯಾಸಗಳನ್ನು, ಅಲ್ಲಿನ ಲಯಗಾರಿಕೆಯನ್ನು ಸೂಕ್ಷ್ಮವಾಗಿ ಗಮನಿಸುತ್ತಾರೆ. ತಮ್ಮದೇ ಆದ ವಿಮರ್ಶೆ ವಿಧಾನಗಳಲ್ಲಿ ಭಾಷಾ ರಚನೆಯನ್ನು ಅವರು ಹೆಣೆದಿದ್ದಾರೆ. ಅವರಲ್ಲಿ ನವ್ಯ ಪಾರಿಭಾಷಿಕ ಶಬ್ದಗಳ ಆಡಂಬರವಿಲ್ಲ, ಬಳಕೆ ಇದೆ. ಇವರ ವಿಮರ್ಶೆಯ ಭಾಷೆಯಲ್ಲಿ ಬಿಗಿ, ಗಟ್ಟಿತನ ಇದೆ. ಸರಳತೆಯಿಂದ ವಿಮರ್ಶಿಸಿ ಕೃತಿಗಳನ್ನು ಅರ್ಥಮಾಡಿಸಬೇಕೆಂಬ ಮಟ್ಟಿಗೆ ಭಾಷೆಯನ್ನು ನಿರೂಪಿಸಿಲ್ಲ.

ಜಿ.ಎಚ್. ನಾಯಕರು ವಿಮರ್ಶೆಯಲ್ಲಿ ಕೃತಿಯ ಶಾಬ್ದಿಕ ಸ್ವರೂಪಕ್ಕೆ ಹೆಚ್ಚಿನ ಮನ್ನಣೆ ನೀಡುತ್ತಾರೆ. ಸಾಹಿತ್ಯ ಕೃತಿಯೊಂದನ್ನು ವಿಶಿಷ್ಟವಾದ ಭಾಷೆಯ ಮೂಲಕ ಪ್ರತಿಪದ, ಅರ್ಥಗಳನ್ನೆಲ್ಲ ಗಮನಿಸುತ್ತಾರೆ. ಹೊಸ ಹೊಸ ಆಲೋಚನೆಗಳ ಮೂಲಕ ತಮ್ಮ ವಿಶಿಷ್ಟವಾದ ವಿಮರ್ಶಾನಿಲುವು ಗಳನ್ನು ನವ್ಯ ವಿಮರ್ಶೆಯ ಪರಿಭಾಷೆಗಳ ಮೂಲಕ ಅವಲೋಕಿಸುತ್ತಾರೆ. ಸಂಕೇತ, ಪ್ರತಿಮೆ, ತಂತ್ರ, ಶೈಲಿ, ವಸ್ತು, ಅನುಭವದನಿ, ಅಲಂಕಾರ ಇವುಗಳನ್ನು ಸಾಹಿತ್ಯ ಕೃತಿಗಳಲ್ಲಿ ಸೃಜನಶೀಲ, ಅನುಭವ, ಅಭಿವ್ಯಕ್ತಿಯ ಹಿನ್ನಲೆಯಲ್ಲಿ ಸ್ವೋಪಜ್ಞತೆಯನ್ನು ಕುರಿತು ವಿಮರ್ಶಿಸುವಾಗ ಭಾಷೆಯು ಮುಖ್ಯವಾಗು ತ್ತದೆ. ನಾಯಕರು ಈ ವಿಮರ್ಶಾ ತಂತ್ರಗಳನ್ನು ಬಳಸಿ ಭಾಷೆಯಲ್ಲಿ ತಾರ್ಕಿಕವಾಗಿ ವಾಗ್ವಾದ ನಡೆಸುತ್ತಾರೆ.

ಜಿ.ಎಚ್. ನಾಯಕರ ವಿಮರ್ಶೆಯ ಭಾಷೆ ವಿನಯವುಳ್ಳದ್ದು ಕೂಡ ಅವರ ವಿಮರ್ಶೆಯ ವಿಶ್ಲೇಷಣೆ ತೀಕ್ಷ್ಣವಾಗಿದೆ. ಅದು ಕೃತಿನಿಷ್ಠ ಮತ್ತು ವ್ಯಕ್ತಿನಿಷ್ಠವಾಗಿರುತ್ತದೆ. 'ರನ್ನನ ಒಂದು ಪದ್ಯದ ಪುನರ್ವಿಮರ್ಶೆ,' 'ಆ ನೀರೊಳಗಿರ್ದುಂ ಬೆಮರ್ತನ್' ಎಂಬ ಲೇಖನಗಳಲ್ಲಿ ಪೋಲಂಕಿ ರಾಮಮೂರ್ತಿಯವರ ಅಭಿಪ್ರಾಯಗಳಿಗೆ ಭಿನ್ನಮತವಿಟ್ಟುಕೊಂಡು ವಿಮರ್ಶೆಯ ವಿನಯದೊಂದಿಗೆ ಚರ್ಚಿಸುತ್ತಾರೆ. ಪ್ರಾಯೋಗಿಕ ವಿಮರ್ಶೆ, ಚಾರಿತ್ರಿಕ ವಿಮರ್ಶೆ, ಕೃತಿನಿಷ್ಠತೆ, ಸಂಸ್ಕೃತಿನಿಷ್ಠ ಈ ಎಲ್ಲಾ

ವಿಧಾನಗಳನ್ನು ಅನುಸರಿಸುವಾಗ ನವ್ಯದ ಸಾಹಿತ್ಯಿಕ ಪರಿಭಾಷೆಗಳ ನೆಲೆಯಲ್ಲಿಯೇ ನಾಯಕರು ವಿಮರ್ಶಿಸುತ್ತಾರೆ. ಪ್ರಾಚೀನ ಸಾಹಿತ್ಯ ಮತ್ತು ಆಧುನಿಕ ಸಾಹಿತ್ಯದ ಕೃತಿಗಳನ್ನು ವಿಮರ್ಶೆಗೆ ಒಡ್ಡುವಾಗ ನಾಯಕರ ನವ್ಯದ ವಿಮರ್ಶೆಯ ಭಾಷೆಯಲ್ಲಿಯೆ ಶಬ್ದ ಮತ್ತು ಅರ್ಥಗಳನ್ನು ಬಿಡಿಸಿ ವ್ಯಾಖ್ಯಾನಿಸುತ್ತಾರೆ.

ಜಿ.ಎಚ್. ನಾಯಕರ ವಿಮರ್ಶೆಯ ಅಭಿವ್ಯಕ್ತಿ ಕ್ರಮವು ಸರಳತೆಯಿಂದ ಕೂಡಿಲ್ಲ. ಶಬ್ದಗಳ ವೈಭವ ತುಸು ಹೆಚ್ಚಾಗಿ ವಿದ್ವತ್ ವಲಯದಲ್ಲೆ ಚರ್ಚೆ ಮಾಡಬಹುದಾದ ಮಟ್ಟಿಗೆ ಭಾಷೆ ಜಟಿಲ ಮತ್ತು ಸಂಕೀರ್ಣ. ಅವು ಸಾಮಾನ್ಯ ಓದುಗರನ್ನು ದೃಷ್ಟಿಯಲ್ಲಿಟ್ಟು ಬರೆದ ಬರಹಗಳಂತೆ ಕಾಣಿಸುವುದಿಲ್ಲ. ಇಂತಹ ಶಾಬ್ದಿಕ ಬಳಕೆಯಿಂದಾಗಿ ಇವರ ವಿಮರ್ಶೆಯ ಸಂವಹನಶೀಲತೆ ಎಲ್ಲರಿಗೂ ತಲುಪಿದೆಯೇ? ಎಂಬ ಪ್ರಶ್ನೆಯು ಕೂಡ ಮುಖ್ಯವಾಗುತ್ತದೆ ಎಂದು ಅನ್ನಿಸುತ್ತದೆ.

### ೫.೩. ವಿಮರ್ಶಾ ಶೈಲಿ

ಜಿ.ಎಚ್. ನಾಯಕರ ವಿಮರ್ಶೆಯಲ್ಲಿ 'ರೆಟಾರಿಕ್' ಮಾದರಿಯನ್ನು ಸ್ಥೂಲವಾಗಿ ಕಾಣಬಹುದು. ನವೋದಯ, ನವ್ಯ, ನವ್ಯೋತ್ತರ, ಸಾಹಿತ್ಯ ಕೃತಿಗಳ ಬಗೆಗೆ ಕಲಾತ್ಮಕ ವಿವರಣೆಯ ಮುಕ್ತತೆಯಿಂದ ನಾಯಕರು ವಿಮರ್ಶೆಗೆ ತೊಡಗುತ್ತಾರೆ. ನಾಯಕರು ಸಮಕಾಲೀನ ಪ್ರತಿಭಾನ್ವಿತ ಲೇಖಕರ ಬಗೆಗೆ ಹೆಚ್ಚು ಒತ್ತುಕೊಟ್ಟು ವಿಮರ್ಶಿಸುತ್ತಾರೆ. ಅಡಿಗ, ಅನಂತಮೂರ್ತಿ, ತೇಜಸ್ವಿಯವರ ಕೃತಿಗಳಲ್ಲಿ ನವ್ಯಮಾರ್ಗದ ರೂಹುಗಳ ಮೂಲಕವೇ ಅಧ್ಯಯನಕ್ಕೆ ತೊಡಗುತ್ತಾರೆ. ಅನಂತಮೂರ್ತಿಯವರ ಕತೆಗಳನ್ನು ಕುರಿತು "ಅವರ ಕಥಾಸಾಹಿತ್ಯದ ಘನೋದ್ದಿಶ್ಯ, ನಿರ್ವಹಣೆಯ ವಿಧಾನ ಹಾಗೂ ಅಭಿವ್ಯಕ್ತಿ ಪ್ರಕ್ರಿಯೆಯ ಮೂಲಕ ಅನುಭವಕ್ಕೆ ಬರುವ ಶಕ್ತಿ (Power) ಮತ್ತು ಸಮೃದ್ಧಿ (Opulence) ಯಲ್ಲಿ ಅವುಗಳ ಗುಣ, ದೋಷಗಳೊಂದಿಗೆ ಗುರುತಿಸಬೇಕಾಗುತ್ತದೆ.[೧]" ಎಂದು ನಾಯಕರು ಅನಂತಮೂರ್ತಿಯವರ ಕಥನ ಸಾಹಿತ್ಯವನ್ನು ಕುರಿತು ಗ್ರಹಿಸುತ್ತಾರೆ. ನಾಯಕರು ಪಾಶ್ಚಾತ್ಯ ನವ್ಯ ವಿಮರ್ಶೆಯ ಅನುಕರಣೆ, ಪರಿಭಾಷೆಗಳನ್ನು ಬಳಸುವುದಿಲ್ಲ. ತಮಗೆ ಮೆಚ್ಚುಗೆಯಾದ ಆ ಕೃತಿಗಳ ಒಳಗೆಯೇ ವಿಮರ್ಶೆಯ ಉಪಕರಣಗಳನ್ನು ಪತ್ತೆ ಹಚ್ಚಿ ವಿಮರ್ಶಿಸುವುದು ಇವರ ವಿಮರ್ಶೆಯ ವಿಶೇಷವಾದ ಗುಣ.

ನಾಯಕರ ವಿಮರ್ಶೆಯಲ್ಲಿ ಅನ್ವೇಷಣೆ ಚುರುಕಾಗಿ ಕಾಣಬರುತ್ತದೆ. ನಾಯಕರು ವಾದಗಳನ್ನು ಸಮರ್ಥಿಸಿಕೊಳ್ಳಲು ಕೃತಿಯೊಳಗೆ ಆಧಾರಗಳನ್ನು ಹುಡುಕುತ್ತಾರೆ. 'ಪಂಪನ ಪದ್ಯವೊಂದರ ಪುನರ್ವಿಮರ್ಶೆ,' ರನ್ನನ ಒಂದು ಪದ್ಯದ ಪುನರ್ವಿಮರ್ಶೆ', 'ಆ ನೀರೊಳಗಿರ್ದುಂ ಬೆಮರ್ತನ್' ಮುಂತಾದ ಲೇಖನಗಳಲ್ಲಿ ನಾಯಕರು ಪ್ರತಿಪದ ಮತ್ತು ಅರ್ಥಗಳಿಂದ ವಿಮರ್ಶಿಸುತ್ತಾರೆ. ಹಾಗೂ

ಆ ಪದ್ಯಗಳ ಮೇಲೆ ಬಂದಿರುವ ವಿಮರ್ಶೆಯ ಪಲ್ಲಟಗಳನ್ನು ಗುರುತಿಸುತ್ತಾರೆ. ಆ ವಿಮರ್ಶೆಯ ಬಗೆಗೆ ನಿಖರವಾದ ವಿಮರ್ಶೆಯ ತಾತ್ವಿಕ ಸ್ವರೂಪದಲ್ಲಿ ತೀರ್ಮಾನಗಳನ್ನು ಹೇಳಿ ಬಿಡುತ್ತಾರೆ. ಪರಂಪರೆಯ ಅನುಸಂಧಾನದ ನೆಲೆಯಲ್ಲಿಯೇ ಮತ್ತು ಚಾರಿತ್ರಿಕ ಪ್ರಜ್ಞೆಯೊಂದಿಗೆ ವಿಮರ್ಶಿಸುವುದು ನಾಯಕರಿಗೆ ವಿಶೇಷವಾದ ಆಸಕ್ತಿ ಎಂಬುದು ಇವರ ಲೇಖನಗಳಲ್ಲಿ ಕಾಣುತ್ತದೆ.

ನಾಯಕರ ವಿಮರ್ಶೆಯಲ್ಲಿ ಪ್ರತಿಪಾದನೆ ಗಾಂಭೀರ್ಯ ಸ್ವರೂಪದಿಂದ ಕಾಣುತ್ತದೆ. ಡಿ.ಎಲ್. ನರಸಿಂಹಾಚಾರ್, ಸಿ.ಪಿ.ಕೃಷ್ಣಕುಮಾರ್, ಪೋಲಂಕಿ ರಾಮಮೂರ್ತಿ, ಕೆ.ಪಿ. ಪೂರ್ಣಚಂದ್ರ ತೇಜಸ್ವಿ, ಮೊದಲಾದವರ ವಿಮರ್ಶೆಯ ಅಭಿಪ್ರಾಯಗಳಿಗೆ ನಾಯಕರು ಸಮರ್ಥನೆ ಅಥವಾ ದೋಷಾರೋಪಣೆಯನ್ನು ಮಾಡುತ್ತ ತಮ್ಮ ವಿಮರ್ಶೆಯ ನಿಲುವನ್ನು ಪ್ರತಿಪಾದಿಸುತ್ತಾರೆ. ಈ ರೀತಿಯ ವಿಮರ್ಶೆಯ ಶೈಲಿಯು ಕೂಡ ಇವರಲ್ಲಿ ಬಹುತೇಕ ಕಾಣುತ್ತದೆ. ಇದು ಇವರ ಚಿಕಿತ್ಸಕ ಗುಣವು ಆಗಿ ಕಾಣಬರುತ್ತದೆ. ನಾಯಕರು ನವ್ಯದ ಅಧ್ಯಯನದ ಶಿಸ್ತನ್ನು ಹೆಚ್ಚಾಗಿ ಬಳಸಿಕೊಳ್ಳುತ್ತಾರೆ. ನಾಯಕರ ವಿಮರ್ಶೆಯಲ್ಲಿ ಹೊಗಳಿಕೆ, ನಿಂದನೆ ಯಾವುದೂ ಇಲ್ಲ. ಆದ್ದರಿಂದಲೇ ಟಿ.ಪಿ. ಅಶೋಕ್‌ರವರು "ವಿಮರ್ಶೆಯ ನಿಜದನಿಯನ್ನವರು ಹುಸಿ, ಭಯಭಕ್ತಿಗಳಿಗಾಗಲಿ ದಯೆ ದಾಕ್ಷಿಣ್ಯಗಳಿಗಾಗಲೀ ಮಾರಿಕೊಳ್ಳುವುದಿಲ್ಲ.[೨]" ಎಂದು ಹೇಳುತ್ತಾರೆ.

ನಾಯಕರ ವಿಮರ್ಶಾ ರೀತಿಯೇ ಹೇಳಬೇಕಾದ್ದನ್ನು ಮುಚ್ಚು ಮರೆಯಿಲ್ಲದೆ ಹೇಳುವುದು. ಕೃತಿಯನ್ನು ಅಕ್ಷರ-ಅಕ್ಷರ ಸಹಿತ ಬಗೆದು ನೋಡುತ್ತಾರೆ. ಅವರು ಕೃತಿಯನ್ನು ಇಡಿಯಾಗಿ ಕೇಂದ್ರೀಕರಿಸಿಕೊಂಡು ವಿಮರ್ಶಿಸುತ್ತಾರೆ. ಶಬ್ದಗಳ ಆಡಂಬರ ಅಥವಾ ಮಾಯಜಾಲದಲ್ಲಿ ನಾಯಕರು ಮುಳಗಿ ಹೋಗುವುದಿಲ್ಲ. ಶಬ್ದ ವಿನ್ಯಾಸದ ವಿಶ್ಲೇಷಣೆಯಲ್ಲಿ ಪ್ರತಿ ಅಕ್ಷರಕ್ಕೂ, ಪದಕ್ಕೂ ನಿಷ್ಠೆ ತೋರಿಸಿ ನಾಯಕರು ವಿಮರ್ಶಿಸುವ ಮಾದರಿ ವಿಶೇಷವಾದ್ದು. 'ಆ ನೀರೊಳಗಿರ್ದುಂ ಬೆಮರ್ತನ್' ಲೇಖನದ ಕೊನೆಯಲ್ಲಿ ವಾದ-ಪ್ರತಿವಾದಗಳ ನೆಲೆಯಲ್ಲಿ ವಿಮರ್ಶಿಸಿದ್ದಾರೆ. ಕೃತಿಯ ಬಗೆಗಿನ ಮೊದಲ ಮೌಲ್ಯನಿರ್ಣಯವನ್ನು ಸರಿಯಾಗಿ ಗ್ರಹಿಸಿ ವಿಶ್ಲೇಷಿಸುತ್ತಾರೆ. ಆದ್ದರಿಂದ ಇವರ ವಿಮರ್ಶೆಯನ್ನು ಪೋಲಂಕಿ ರಾಮಮೂರ್ತಿಯಂತವರನ್ನು ಬಿಟ್ಟರೆ ಮತ್ಯಾರು ಪುನರ್ವಿಮರ್ಶೆಗೆ ಒಡ್ಡುವ ಪ್ರಯತ್ನ ಮಾಡಿಲ್ಲ. ಆದರೆ ನಾಯಕರ ವಿಮರ್ಶೆಯಲ್ಲಿ ಕೃತಿಯೊಂದನ್ನು ಮೌಲ್ಯಮಾಪನ ಮತ್ತು ಪುನರ್‌ಮೌಲ್ಯಮಾಪನ ಕ್ರಿಯೆ ಮಾತ್ರ ಪ್ರಮುಖ ಗುಣ ವಿಶೇಷವಾಗಿದೆ.

**ಟಿಪ್ಪಣಿಗಳು:**

೧. ನಾಯಕ ಜಿ.ಎಚ್, 'ಸಮಕಾಲೀನ', ಪುಟ-೫೯

೨. ಅಶೋಕ ಟಿ.ಪಿ, 'ಪುಸ್ತಕ ಪ್ರೀತಿ', ಪುಟ-೨೯೭

ಅಧ್ಯಾಯ: ೬.

# ಜಿ.ಎಚ್. ನಾಯಕರ ವಿಮರ್ಶೆ: ತೌಲನಿಕ ಅಧ್ಯಯನ

೬.೧. 'ಕಾರಂತರ ಕಾದಂಬರಿಗಳಲ್ಲಿ ಜೀವನಶ್ರದ್ಧೆ ಮತ್ತು ಶೋಧನೆ' ಹಾಗೂ 'ಕಾರಂತರ ಅಥೆಂಟಿಕ್ ಪ್ರಪಂಚ'

೬.೨. 'ಚದುರಂಗರ ವೈಶಾಖ' ಹಾಗೂ 'ಎರಡು ಜಗತ್ತುಗಳ ವೈಶಾಖ'

## ೬.೧ 'ಕಾರಂತರ ಕಾದಂಬರಿಗಳಲ್ಲಿ ಜೀವನ ಶ್ರದ್ಧೆ ಮತ್ತು ಶೋಧನೆ' ಹಾಗೂ 'ಕಾರಂತರ ಅಥೆಂಟಿಕ್ ಪ್ರಪಂಚ'

(ಜಿ.ಎಚ್. ನಾಯಕ– ಯು.ಆರ್. ಅನಂತಮೂರ್ತಿ)

ಈ ಭಾಗದಲ್ಲಿ ಜಿ.ಎಚ್. ನಾಯಕ ಮತ್ತು ಯು.ಆರ್. ಅನಂತಮೂರ್ತಿಯವರ ಈ ಎರಡು ಲೇಖನಗಳನ್ನು ತೌಲನಿಕವಾಗಿ ಗಮನಿಸಲಾಗಿದೆ. ಹಾಗೆ ಗಮನಿಸುವಾಗ ಎರಡು ಭಿನ್ನ ವಿಮರ್ಶಾ ಶೈಲಿಗಳು ನಮಗೆ ಎದುರುಗೊಳ್ಳುತ್ತವೆ. ನಾಯಕರು ಕಾರಂತರ ಕಾದಂಬರಿಗಳಲ್ಲಿ ಜೀವನಶ್ರದ್ಧೆ ಮತ್ತು ಶೋಧನೆ ಎಂಬ ಎರಡು ಪರಿಕಲ್ಪನೆಗಳೊಂದಿಗೆ ವಿಮರ್ಶೆಗೆ ತೊಡಗುತ್ತಾರೆ. ಅನಂತಮೂರ್ತಿಯವರು ಕಾರಂತರ ಕಾದಂಬರಿಯ ಸಮಗ್ರ ಅಧ್ಯಯನ ಮಾಡುತ್ತಾ ಅದನ್ನು 'ಅಥೆಂಟಿಕ್' ಪ್ರಪಂಚ ಎನ್ನುವ ಪರಿಕಲ್ಪನೆಯೊಂದಿಗೆ ವಿಮರ್ಶಿಸುತ್ತಾರೆ. 'ಅಥೆಂಟಿಕ್' ಶಬ್ದಕ್ಕೆ ಅರ್ಥ 'ಅಧಿಕೃತ' 'ನಿಜವಾದ' ಎಂಬರ್ಥವಿದೆ. ಸೂಕ್ಷ್ಮವಾಗಿ ಅವಲೋಕಿಸಿದಾಗ ಕಾರಂತರು ಕಾದಂಬರಿಗಳಲ್ಲಿ ಬಳಸುವ 'ವಾಸ್ತವ' ಪ್ರಪಂಚವನ್ನು ಹೆಣೆದ ಬಗೆಯನ್ನು ನಾಯಕರು ಗುರುತಿಸುತ್ತಾರೆ. ಅನಂತಮೂರ್ತಿಯವರು ಸಹಾನುಭೂತಿ, ಔದಾರ್ಯ, ಸ್ನೇಹ, ಜೀವನಶ್ರದ್ಧೆ, ಕಷ್ಟ ಸಹಿಷ್ಣುತೆ– ಇಂತಹ ಸಾರ್ವತ್ರಿಕ ಮೌಲ್ಯಗಳನ್ನು ಕಾರಂತರ ಕಾದಂಬರಿಗಳಲ್ಲಿ ಶೋಧಿಸುತ್ತಾರೆ.

ಜಿ.ಎಚ್. ನಾಯಕರು ಕಾರಂತರ ಕಾದಂಬರಿಗಳನ್ನು ಕುರಿತು "ಆಯಾ ವ್ಯಕ್ತಿಗಳ ಬದುಕಿನ ಸಾರ್ಥಕತೆ, ಅಸಾರ್ಥಕತೆಗಳನ್ನು ಕಲಾತ್ಮಕ ನೆಲೆಯಲ್ಲಿ ಕಾಣಿಸಲು, ವ್ಯಾಖ್ಯಾನಿಸಲು ಯತ್ನಿಸುವುದು ಕಾರಂತರ ರೀತಿ[೧]" ಎಂದು ಗುರುತಿಸುತ್ತಾರೆ. ಯು.ಆರ್.ಅನಂತಮೂರ್ತಿಯವರು "ಸುಂದರವಾಗಿ ಕಾಣಬೇಕು, ಆಕರ್ಷಕವಾಗಿ ಕಾಣಬೇಕು ಎನ್ನುವ ಚಪಲವಿಲ್ಲದೆ, ಆಯ್ದುಕೊಂಡ ವಿಷಯದಲ್ಲಿ ಏಕಾಗ್ರ ಮನಸ್ಕರಾಗಿ ಇವರು ಸೃಷ್ಟಿಸುತ್ತಾರೆ. ಎದ್ದು ಕಾಣುವ ಶೈಲಿಯ ಚೆಲುವಿಗಾಗಿ, ಪಾತ್ರಗಳ ಮನೋಹರತೆಗಾಗಿ, ಸುಲಭವಾಗಿ ಓದಿಸಿಕೊಳ್ಳಬೇಕೆಂಬ ಆಸೆಗಾಗಿ ಇವರು ಪ್ರಯತ್ನಿಸದೆ ಇರುವುದರಿಂದ, ತಮ್ಮ ಸಮಕಾಲೀನರ ಹಾಗೆ ಸಾಹಿತ್ಯ ಸೃಷ್ಟಿಗೆಂದೇ ಇನ್ನೊಂದು ವ್ಯಕ್ತಿತ್ವವನ್ನು ಮಾಡಿಕೊಳ್ಳುವುದರಿಂದ ಕಾರಂತರು ನಮ್ಮ ಅತ್ಯಂತ 'ಅಥೆಂಟಿಕ್' ಲೇಖಕರು ಎಂದು ನಮಗೆ ಅನ್ನಿಸುವುದು.[೨]" ಎಂದು ಹೇಳುತ್ತಾರೆ. ಈ ಎರಡು ಹೇಳಿಕೆಗಳನ್ನು ಗಮನಿಸಿದಾಗ ಇಬ್ಬರಲ್ಲೂ ಕಾರಂತರ ಶೈಲಿಯ ಬಗೆಗೆ ದ್ವಂದ್ವಾತ್ಮಕ ನಿಲುವುಗಳು ಇರುವುದನ್ನು ಕಾಣಬಹುದು.

ಯು.ಆರ್. ಅನಂತಮೂರ್ತಿಯವರು ತಮ್ಮ 'ಕಾರಂತರ ಅಥೆಂಟಿಕ್ ಪ್ರಪಂಚ' ಲೇಖನದಲ್ಲಿ "ಕಾರಂತರ ಶೈಲಿ, ವಸ್ತು ವಿನ್ಯಾಸ, ದೃಷ್ಟಿ, ಪಾತ್ರಗಳ ಆಯ್ಕೆ ಮತ್ತು ರಚನೆ

ಇತ್ಯಾದಿಗಳಲ್ಲಿ ಎಷ್ಟು ಅನ್ಯೋನ್ಯತೆ, ಸಾಕಲ್ಯ ಕಾಣಿಸುತ್ತದೆ ಎಂಬುದನ್ನು ಚರ್ಚಿಸುವುದು ನನಗೆ ಅವಶ್ಯ.[5]" ಎಂದು ಹೇಳುತ್ತಾ ಕಾರಂತರ ಕಾದಂಬರಿ ಲೋಕವನ್ನು ಗ್ರಹಿಸುತ್ತಾರೆ. ನಾಯಕರು ಕಾರಂತರಲ್ಲಿ ಇರುವ ವಾಸ್ತವದ ಜೀವನಶ್ರದ್ಧೆ ಮತ್ತು ಜೀನವಶೋಧ ಕಾದಂಬರಿಗಳಲ್ಲಿ ಮೂಡಿ ಬರುತ್ತದೆ. ವ್ಯಕ್ತಿತ್ವ ಶೋಧನೆ ಮತ್ತು ಜೀವನಶ್ರದ್ಧೆಯ ಶೋಧನೆಯ ಹುಡುಕಾಟದಲ್ಲಿ ಕಾದಂಬರಿಯ ನಾಯಕ, ಮುದುಕಿಯರು, ಸಾಮಾನ್ಯ ಜನರಲ್ಲಿ ಅದು ಹೇಗೆ ಅಭಿವ್ಯಕ್ತ ಗೊಂಡಿದೆ ಎಂಬುದನ್ನು ಪಾತ್ರಗಳ ಮೂಲಕ ವಿಶ್ಲೇಷಿಸುತ್ತಾರೆ. ಕಾದಂಬರಿಗಳ ಮೂಲಕ ಧ್ವನಿ ಪಡೆಯುವ ಜೀವನಾನುಭವ ಮತ್ತು ಅದರ ಅಭಿವ್ಯಕ್ತಿಗೆ ಸಂಬಂಧಿಸಿದ ಮಿತಿ–ಮಹತ್ವಗಳನ್ನು ಕುರಿತು ಅವರು ಧ್ವನಿಸುತ್ತಾರೆ.

ನಾಯಕರು ಕಾರಂತರ ಕಾದಂಬರಿ ಬಗೆಗೆ ಮಾತನಾಡುವಾಗ ಕನ್ನಡ ಕಾದಂಬರಿಕಾರರ ಜೊತೆ ಹೋಲಿಸಿ ಕಾರಂತರ ಶೈಲಿಯನ್ನು ಸಮರ್ಥಿಸುತ್ತಾರೆ. ಯು.ಆರ್. ಅನಂತಮೂರ್ತಿಯವರ 'ಮೌನಿ' 'ಸಂಸ್ಕಾರ' ಗಳಲ್ಲಿ ಬಾಲ ವಿಧವೆಯರಾಗಿದ್ದ ಮುದುಕಿಯರಂತೆ ಪಿರಿ ಪಿರಿಯ, ಅರೆ ಮರುಳ ಮುದುಕಿಯರು ಕಾರಂತರ ಕಾದಂಬರಿಗಳಲ್ಲಿ ಇಲ್ಲ" ಎಂದು ತೀರ್ಮಾನಕ್ಕೆ ಬರುತ್ತಾರೆ. ಇದರ ಮೂಲಕ ನಾಯಕರು ಕನ್ನಡ ಪರಂಪರೆಯ ಒಳಗಿನ ಲೇಖಕನೊಂದಿಗೆ ಕಾರಂತರ ರಚನೆಯನ್ನು ಅಭಿವ್ಯಕ್ತಿಯನ್ನು ಹೋಲಿಸುವುದನ್ನು ಕಾಣುತ್ತೇವೆ. ಆ ರೀತಿಯ ಹುಡುಕಾಟವೇ ನಾಯಕರ ವಿಮರ್ಶೆಯಲ್ಲಿ ಹೆಚ್ಚು ಕಾಣುತ್ತದೆ. ಆದರೆ ಯು.ಆರ್. ಅನಂತಮೂರ್ತಿಯವರು "ಕಾರಂತರಲ್ಲಿ ಕಾಮು, ಜಾಯ್ಸ್, ಕಾಫ್ಕಾರಂತಹ ಕಾದಂಬರಿಕಾರರು ನಡೆಸುವ ಸ್ವಗತದ ಶೋಧನೆಗೆ ಬದಲಾಗಿ ವ್ಯಕ್ತಿ ಸಮಾಜದ ಸಂವಾದವೇ ಮುಖ್ಯ ವಸ್ತುವಾಗುತ್ತದೆ." ಎಂದು ಪಾಶ್ಚಾತ್ಯ ಕಾದಂಬರಿಕಾರರ ರಚನೆ, ತಂತ್ರ, ಶೈಲಿ, ವಸ್ತುನಿಷ್ಠತೆಗಳೊಂದಿಗೆ ಇಟ್ಟು ಕಾರಂತರ ಕಾದಂಬರಿಗಳನ್ನು ಹೋಲಿಸುತ್ತಾರೆ.

ಜಿ.ಎಚ್. ನಾಯಕ ಮತ್ತು ಯು.ಆರ್. ಅನಂತಮೂರ್ತಿ ಅವರಲ್ಲಿ ಕಾರಂತರ ಜೀವನದೃಷ್ಟಿ ಕುರಿತಂತೆ ಒಂದೇ ರೀತಿಯ ಅಭಿಪ್ರಾಯಗಳಿವೆ. ಕಾರಂತರ ಕಾದಂಬರಿಗಳು ಸಮಾಜದ ಪ್ರತಿಸೃಷ್ಟಿಯಲ್ಲಿ ಜೀವನದಿಂದ ಹೊರಗೆ ಬಂದ ಜೀವಂತ ದಾಖಲೆ. ಇಂತಹ ಪ್ರಪಂಚವನ್ನು ಸೂಕ್ಷ್ಮ ಮನಸ್ಸಿನಿಂದ, ಶೋಧನಾತ್ಮಕ ನೆಲೆಯಿಂದ ಗಮನಿಸಿ ಕಾದಂಬರಿಯನ್ನು ಕಟ್ಟಿಕೊಡುವುದು ಕಾರಂತರ ಉದ್ದೇಶ. ನಾಯಕರ ಲೇಖನ ತುಂಬ ಸರಳವಾಗಿದೆ. ಶೀರ್ಷಿಕೆಗೆ ಅನ್ವಯವಾಗಿ ಕಾದಂಬರಿ ಮತ್ತು ಆ ಕಾದಂಬರಿಯ ಪಾತ್ರಗಳ ಮೂಲಕ ಮೌಲ್ಯಗಳನ್ನು ಅವರು ಹುಡುಕುತ್ತಾರೆ. ಇವರೀರ್ವರು ಕೂಡ ಕಾರಂತರ ಕಾದಂಬರಿಗಳ ವಸ್ತು ಬಹುತೇಕ ಮಾಗುವಿಕೆಯದ್ದಾಗಿರುತ್ತದೆ ಎಂದು ಗುರುತಿಸುತ್ತಾರೆ. ಬರವಣಿಗೆಯ ಧಾಟಿ, ವಿವೇಕ, ತಾರತಮ್ಯ ವಿವೇಚನೆಯ ಎಚ್ಚರ ಇವೆಲ್ಲದರ ಬಗ್ಗೆ

ಪ್ರತಿಕ್ರಿಯಿಸುತ್ತಾರೆ. ಆದರೆ ಸ್ವಲ್ಪ ಭಿನ್ನವಾಗಿ ಜಿ.ಹೆಚ್. ನಾಯಕರು ಕಾರಂತರ ಕಾದಂಬರಿ "ಆಳವಾದ ತಾತ್ವಿಕ ಅರಿವನ್ನು ಸೋಸಿಕೊಡುವಷ್ಟು ಸೃಜನಶೀಲವಾಗುವುದಿಲ್ಲ". ಎಂದು ಹೇಳುತ್ತಾರೆ.

ಅನಂತಮೂರ್ತಿಯವರು ಕಾರಂತರ ಕಾದಂಬರಿಗಳನ್ನು ವೈಜ್ಞಾನಿಕ ದೃಷ್ಟಿ, ಜೀವನದೃಷ್ಟಿ, ಚಿಕಿತ್ಸಕ ದೃಷ್ಟಿ ಮತ್ತು ಪಾಶ್ಚಾತ್ಯ ಕಾದಂಬರಿಕಾರರ ಕಾದಂಬರಿಗಳಿಗೆ ಹೋಲಿಸಿ ನೋಡಿ ಕಾರಂತರ ಬಗೆಗೆ ಮೌಲ್ಯ ನಿರ್ಣಯಿಸುತ್ತಾರೆ. ಆದರೆ ನಾಯಕರು ಕನ್ನಡ ಸಾಹಿತ್ಯ ಪರಂಪರೆಯೊಳಗೆ ಕಾರಂತರ ಕಾದಂಬರಿಗಳನ್ನು ವಸ್ತು, ತಂತ್ರ, ಶೈಲಿಗಳ ನೆಲೆಯಿಂದಲೇ ಶೋಧಿಸುತ್ತಾರೆ. ಅನಂತಮೂರ್ತಿಯವರಿಗೆ ಇರುವಷ್ಟು ಪಾಶ್ಚಾತ್ಯ ಸಾಹಿತ್ಯ ವಿಮರ್ಶೆಯ ಪರಿಚಯ ಮತ್ತು ಪರಂಪರೆ ಯಿಂದ ನಾಯಕರು ಕಾರಂತರನ್ನು ಹೋಲಿಸುವುದಿಲ್ಲ. ಅನಂತಮೂರ್ತಿಯವರು ಕಾಫ್ಕಾ, ಕಾಮು, ಜಾಯ್ಸ್ ಮೊದಲಾದವರೊಂದಿಗೆ ಕಾರಂತರ 'ಅಥೆಂಟಿಕ್' ಬರಹವನ್ನು ಶೋಧಿಸುತ್ತಾರೆ.

ಯು.ಆರ್. ಅನಂತಮೂರ್ತಿಯವರು ಕಾರಂತರ ಕಾದಂಬರಿಗಳಲ್ಲಿ ಭಾಷೆ ಬರೀ ಸಾಧನ ವಾಗಿದೆ ಮತ್ತು ವಾಹಕವಾಗಿದೆ ಎಂದು ಗ್ರಹಿಸುತ್ತಾರೆ. ಕಾರ್ನಾಡ್, ಲಾರೆನ್ಸ್‌ರಂತಹ ಕಾದಂಬರಿಕಾರರಲ್ಲಿ ಭಾವಗೀತಾತ್ಮಕ ಉತ್ಕರ್ಷ ಗುಪ್ತಸುಳಿಗಳಂತೆ ಅಡಗಿ ಓದುಗರನ್ನು ಪರಿಚಿತ ಲೋಕದ ನೆಲೆ ತಪ್ಪಿಸಿ ಅರಿಯದ ಆಳಕ್ಕೆ ಸೆಳೆದುಕೊಳ್ಳುತ್ತದೆ. ಕಾರಂತರಲ್ಲಿ ಇಂತಹ ಸುಳಿಯಿಲ್ಲ. ಎಂಬುದಾಗಿ ಹೇಳುತ್ತಾರೆ. ಜತೆಗೆ "ಕಾರಂತರ ಕಾದಂಬರಿಗಳನ್ನು ಓದುವಾಗ ಇವರಿಗೆ ಮಾಧ್ಯಮದ ಬಗ್ಗೆ ಕುತೂಹಲವಿಲ್ಲ. ಈ ಕುತೂಹಲವಿದ್ದಿದ್ದರೆ ಇವರ ಲೋಕ ಇನ್ನಷ್ಟು ಹಿಗ್ಗಬಹುದಿತ್ತು. ದೃಷ್ಟಿ ಇನ್ನಷ್ಟು ಚೂಪಾಗಬಹುದಿತ್ತು." ಎಂಬ ಅಭಿಪ್ರಾಯವನ್ನು ಮಂಡಿಸುತ್ತಾರೆ. ಇವು ಕಾರಂತರ ಬರವಣಿಗೆ ಮಿತಿಯೂ ಆಗಿವೆ ಎಂಬುದನ್ನು ಸೂಕ್ಷ್ಮವಾಗಿ ಗ್ರಹಿಸುತ್ತಾರೆ, ಜಿ.ಎಚ್.ನಾಯಕರು "ಕಾರಂತರ ತಿಳವಳಿಕೆಗೆ ಹೆಚ್ಚಿನ ಆಳವಿಲ್ಲ, ಎಂದಾಗುತ್ತದೆ. ಅನುಭವ ದ್ರವ್ಯದ ವೈವಿಧ್ಯ ಮತ್ತು ವಿಸ್ತಾರ ಸಮೃದ್ಧಿ ಕಾರಂತರ ಕಾದಂಬರಿಗಳಲ್ಲಿ ಇವೆಯಾದರೂ ಜೀವನ ಶ್ರದ್ಧೆಯನ್ನು ಕುರಿತಂಥ ಶೋಧನೆಯು ಉತ್ತಮ ಮಟ್ಟದ ವ್ಯಾವಹಾರಿಕ ಜೀವನ ವಿವೇಕದ ನೆಲೆಯನ್ನು ಗುರುತಿಸಿ ಕೊಡುವವರೆಗೆ ಕ್ರಿಯಾಶೀಲವಾಗುತ್ತದೆಯೆ ಹೊರತು ಆಳವಾದ ತಾತ್ವಿಕ ಅರಿವನ್ನು ಸೋಸಿಕೊಡುವಷ್ಟು ಸೃಜನಶೀಲವಾಗುವುದಿಲ್ಲ" ಎಂದು ಹೇಳುತ್ತಾರೆ. ಇಲ್ಲಿ ಹೆಚ್ಚು ಕಡಿಮೆ ಕಾರಂತರ ಬಗೆಗೆ ಇಬ್ಬರ ಅಭಿಪ್ರಾಯವು ಒಂದೇ ಎಂದು ತೋರುತ್ತದೆ.

ಯು.ಆರ್.ಅನಂತಮೂರ್ತಿ ಅವರು ಪಾಶ್ಚಾತ್ಯ ಸಾಹಿತ್ಯ ಪರಂಪರೆಯೊಂದಿಗೆ ಕಾರಂತರ ಕಾದಂಬರಿಗಳ ಪ್ರಪಂಚವನ್ನು ಸೂಕ್ಷ್ಮವಾಗಿ ಗ್ರಹಿಸುತ್ತಾರೆ. ನವ್ಯದ ಪರಿಕಲ್ಪನೆಯನ್ನು ಗಂಭೀರವಾಗಿ ತೊಡಗಿಸಿ ವಿಮರ್ಶಿಸುತ್ತಾರೆ. ಆದರೆ ನಾಯಕರು ಕನ್ನಡ ಸಾಹಿತ್ಯ ಪರಂಪರೆಯ

ದೃಷ್ಟಿಕೋನದೊಳಗೆ ಕಾರಂತರ ಅನುಭವ ದ್ರವ್ಯ, ಕಥೆ ಕಟ್ಟುವಿಕೆಯನ್ನು ಗ್ರಹಿಸುತ್ತಾರೆ. ನವ್ಯ ವಿಮರ್ಶೆಯನ್ನು, ಪಾಶ್ಚಾತ್ಯ ವಿಮರ್ಶೆಯನ್ನು, ಪಾಶ್ಚಾತ್ಯಸಾಹಿತ್ಯ ಪರಂಪರೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ವಿಶ್ಲೇಷಿಸುವುದಿಲ್ಲ. ನಾಯಕರು ಕನ್ನಡದ ಇತರ ಬರಹಗಾರರನ್ನು ಗಮನಿಸಿ ಕಾರಂತರ ಕಾದಂಬರಿ ಶೈಲಿಯ ಬಗೆಗೆ, ಅವರ ಅನುಭವದ ಬಗೆಗೆ ಮಾತಾಡುತ್ತಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಅನಂತಮೂರ್ತಿಯವರ ವಿಮರ್ಶೆಯ ಗ್ರಹಿಕೆಗಳಿರುವುದು ಪಾಶ್ಚಾತ್ಯ ನೆಲೆಯಿಂದ. ಆದರೆ ಜಿ.ಎಚ್. ನಾಯಕರಲ್ಲಿ ಪಾಶ್ಚಾತ್ಯ ನವ್ಯ ನೆಲೆಯಿದ್ದರೂ ಅವರು ಕನ್ನಡ ಸಾಹಿತ್ಯ ವಿಮರ್ಶೆಯ ಗ್ರಹಿಕೆಗಳಿಂದ ವಿಮರ್ಶೆಗೆ ತೊಡಗುತ್ತಾರೆ.

## ೬.೨. "ಚದುರಂಗ'ರ 'ವೈಶಾಖ' ಮತ್ತು 'ಎರಡು ಜಗತ್ತುಗಳ 'ವೈಶಾಖ''

(ಜಿ.ಎಚ್. ನಾಯಕ ಮತ್ತು ಜಿ.ಪಿ. ಬಸವರಾಜು)

ಚದುರಂಗರ 'ವೈಶಾಖ' ಕಾದಂಬರಿಯು ಅನೇಕ ವಿಮರ್ಶಕರನ್ನು ಎದುರುಗೊಂಡು ಅಧ್ಯಯನಕ್ಕೆ ಒಳಗಾಗಿದೆ. ಓದುಗರನ್ನು ಚಿಂತನೆಗೆ ಸೆಳೆದುಕೊಂಡು ಗಂಭೀರ ಆಲೋಚನೆಗೆ ಮುಕ್ತ ಅವಕಾಶ ನೀಡಿದ ಕಾದಂಬರಿ ಅದು. ಈ ಕಾದಂಬರಿಯ ಬಿಡುಗಡೆ ಸಂದರ್ಭದಲ್ಲಿ ಜಿ.ಎಚ್. ನಾಯಕರು 'ಚದುರಂಗರ ವೈಶಾಖ' ೧೯೮೧ರಲ್ಲಿ ಮಾತಾಡಿದ್ದರ ಬರಹರೂಪವಿದು. ಈ ಸಂದರ್ಭದಲ್ಲಿನ ಮಾತುಗಳು ಕೃತಿನಿಷ್ಠ ಪರಿಶೀಲನೆಗೆ ಮಹತ್ವ ಕೊಟ್ಟವು. 'ವೈಶಾಖ' ಕಾದಂಬರಿ ಬಿಡುಗಡೆಯಾಗಿ ಹದಿನಾಲ್ಕು ವರ್ಷಗಳ ನಂತರ ಜಿ.ಪಿ.ಬಸವರಾಜರವರು 'ಎರಡು ಜಗತ್ತುಗಳ ವೈಶಾಖ' ಎಂಬ ಲೇಖನವನ್ನು ಬರೆಯುತ್ತಾರೆ. ಅದು ಪತ್ರವೊಂದನ್ನು ಬರೆಯುವ ತಂತ್ರಗಾರಿಕೆಯಲ್ಲಿದ್ದು ನೇರವಾಗಿ ಚದುರಂಗರನ್ನು ಮತ್ತು ಕೃತಿಯನ್ನು ಕುರಿತು ವಿಮರ್ಶಿಸುತ್ತದೆ.

ಚದುರಂಗರು ತಮ್ಮ ಕಾದಂಬರಿಯಲ್ಲಿ ತಂತ್ರಯೋಜನೆ, ಭಾಷಾರೂಪ, ಪಾತ್ರಗಳ ವಿವರಗಳಿಗೆ ಸಂಬಂಧಿಸಿದಂತೆ ಯಾವ ದೃಷ್ಟಿಕೇಂದ್ರವನ್ನು ಸೃಷ್ಟಿಸಿ ಕೊಡುತ್ತಾರೆ ಎಂಬ ಪ್ರಶ್ನೆಯನ್ನು ನಾಯಕರು ಎತ್ತುತ್ತಾರೆ. ಕಾದಂಬರಿಯ ತಂತ್ರಯೋಜನೆಗೆ ಸಂಬಂಧಿಸಿದಂತೆ ನಿರೂಪಕನಾಗಿ ಕಾದಂಬರಿಕಾರ ಮೂಡಿಬರುವುದಿಲ್ಲ. ಭಾಷೆಯ ರೂಪದಲ್ಲಿ ನಾಯಕರು ಎರಡು ಜಗತ್ತುಗಳೊಂದಿಗೆ ವಿಸ್ತಾರಗೊಳ್ಳುವುದನ್ನು ತಿಳಿಸುತ್ತಾರೆ. ಒಂದು ಲಕ್ಕನ 'ಗ್ರಾಮ್ಯ ಭಾಷೆ', ರುಕ್ಮಿಣಿಯ 'ಶಿಷ್ಟಭಾಷೆ' ಎಂಬುದನ್ನು ಈ ಎರಡು ಕೇಂದ್ರ ಪಾತ್ರಗಳೊಂದಿಗೆ ನಾಯಕರು ಗುರುತಿಸುತ್ತಾರೆ. ಇದೇ ರೀತಿಯಾದ ಶಿಷ್ಟ ಮತ್ತು ಪರಿಶಿಷ್ಟ ಎಂಬ ಎರಡು ಭಿನ್ನ ಭಾಷಾರೂಪಗಳೊಂದಿಗೆ ಕಾದಂಬರಿಯ

ಹರವು ಇರುವುದನ್ನು 'ಎರಡು ಜಗತ್ತುಗಳ ವೈಶಾಖ' ಎಂಬ ಲೇಖನದಲ್ಲಿ ಜಿ.ಪಿ. ಬಸವರಾಜುರವರು ಗುರುತಿಸುತ್ತಾರೆ.

ಜಿ.ಎಚ್. ನಾಯಕರು ಈ ಕಾದಂಬರಿಯಲ್ಲಿ ಮಾಸ್ತಿಯವರ ಬರವಣಿಗೆಯಲ್ಲಿನ ಆರ್ದ್ರತೆ, ಆಪ್ತತೆಯನ್ನು ಹಾಗೂ ದೇವನೂರ ಮಹಾದೇವ ಅವರ ಬರವಣಿಗೆಯ ಶೈಲಿಯನ್ನು ಚದುರಂಗರ ಬರವಣಿಗೆಯ ಸ್ವರೂಪದಲ್ಲಿ ಗುರುತಿಸುತ್ತಾರೆ. ನಾಯಕರು ವಿಮರ್ಶಾ ದೃಷ್ಟಿಕೋನ ಮತ್ತು ವಿಮರ್ಶಕನ ಕಾರ್ಯವನ್ನು ಈ ಕಾದಂಬರಿಯ ಸಂದರ್ಭದಲ್ಲಿ ವ್ಯಾಖ್ಯಾನಿಸುತ್ತಾರೆ. "ವಿಮರ್ಶಕನಿಗೆ ಕೃತಿಕಾರನಿಗಿಂತ ಕೃತಿಮುಖ್ಯ ವಾಗಿರಬೇಕು. ತನ್ನ ಸ್ವಂತದ ಬೇಕು, ಬೇಡಗಳ ಹಂತವನ್ನು, ಕೃತಿಕಾರನನ್ನು ಕುರಿತಂತೆ ತನಗಿರುವ ಸ್ವಂತದ ಪ್ರೀತಿ, ಗೌರವಗಳನ್ನು ಮೀರಿದ ನೆಲೆಯಲ್ಲಿ ಎದುರಿಗಿರುವ ಕೃತಿಯನ್ನು ಕುರಿತ ಪರಿಭಾವನೆ, ಮೌಲ್ಯ ನಿರ್ಣಯ ವಿಮರ್ಶಕನಿಗೆ ಸಾಧ್ಯವಾಗಬೇಕು[೪]" ಎಂದು ಈ ಕಾದಂಬರಿಯ ಪರಿಚಯ ಸಂದರ್ಭದಲ್ಲಿ ಅವರು ಹೇಳುತ್ತಾರೆ. ಅಂದರೆ ಅವರ ವಿಮರ್ಶೆ ಕಾಳಜಿ ಕೃತಿಯ ಪರಿಶೀಲನೆ ಕಡೆಗೆ ಎಂಬುದಕ್ಕೆ ಇದು ಸಾಕ್ಷಿಯಾಗಿದೆ. ಈ ಸಂದರ್ಭದಲ್ಲೆ ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯನ್ನು ಅವರು ಉಲ್ಲೇಖಿಸುತ್ತಾರೆ. ಆಗ ಈ ಕಾದಂಬರಿಯನ್ನು ಕುರಿತು ವಿಮರ್ಶಿಸಿದ ರೀತಿ ಮತ್ತು ಶ್ರೇಷ್ಠ ಕಾದಂಬರಿ ಎಂಬೆಲ್ಲ ಹೇಳಿಕೆಗಳು ಬಂದದ್ದನ್ನು ನಾಯಕರು ನೆನೆಯುತ್ತಾರೆ. ಹಾಗೆಯೇ ಕುವೆಂಪು ಅವರು ವಿಮರ್ಶಕರ ಬಗೆಗೆ ಕಟುವಾದ ದ್ವಂದ್ವದಲ್ಲಿ ಪದ್ಯ ಬರೆದಿದ್ದನ್ನು ನಾಯಕರು ಉದಾಹರಿಸುತ್ತಾರೆ. ಇದನ್ನು ಹೇಳಿದ್ದರ ಉದ್ದೇಶ ಏನಿರಬಹುದೆಂದು ಗ್ರಹಿಸಿದಾಗ ಚದುರಂಗರ ಕಾದಂಬರಿಯನ್ನು ಮಹತ್ವದ ಕಾದಂಬರಿಯೆಂದು ಒಪ್ಪಿಕೊಳ್ಳುವಾಗ ಕಾದಂಬರಿಕಾರರನ್ನು ನೋಡಿ ಹೊಗಳುವುದಲ್ಲ. ಕೃತಿ ಪರಿಶೀಲನೆ ಮಾಡಿ ಒಪ್ಪಿಕೊಳ್ಳಬೇಕು ಎಂಬ ನಿರ್ಣಯವನ್ನು ಧ್ವನಿಸುವಂತಿದೆ.

ಜಿ.ಪಿ.ಬಸವರಾಜ ಅವರು 'ವೈಶಾಖ'ದ ಕಾದಂಬರಿಯಲ್ಲಿನ ಭಾಷೆ, ತಂತ್ರ, ಶೈಲಿ, ಪಾತ್ರಗಳ ವಿವರ, ವಸ್ತುವಿನೊಂದಿಗೆ ಅಲ್ಲಿನ ಸಾಮಾಜಿಕ ಸಂಬಂಧಗಳು, ಗ್ರಾಮೀಣ ಬದುಕಿನ ವಿವರಗಳು, ವರ್ಗಸಂಘರ್ಷ, ಕ್ರೌರ್ಯ, ಕಾಮ ಮೊದಲಾದ ಅಂಶಗಳನ್ನು ಇಟ್ಟುಕೊಂಡು ಸಾಹಿತ್ಯ ಮತ್ತು ಸಾಮಾಜಿಕ ವಿಶ್ಲೇಷಣೆಯನ್ನು ಮಾಡುತ್ತಾರೆ. ಕಥನ ಸಾಹಿತ್ಯದಲ್ಲಿನ ಭಾಷೆಯ ಭಾವತರಂಗ ಓದುಗನಿಗೆ ತಟ್ಟುವುದು ತನ್ನ ಗ್ರಾಮ್ಯ ಸೊಗಡಿನಿಂದ. ಆ ಗ್ರಾಮ್ಯ ಭಾಷೆಗೆ ಸೋಗಲಾಡಿತನ ಇರುವುದಿಲ್ಲ. ಕಾದಂಬರಿಗೆ ಒಂದು ಸಂವೇದನ ಶಕ್ತಿ ಏರ್ಪಡುವುದು ಭಾಷೆಯಿಂದಲೇ ಎಂಬುದನ್ನು ಗ್ರಹಿಸಬಹುದು. ಶಿಷ್ಟ ಭಾಷೆಯು ಇಂತಹ ಯಾವುದೇ ಗಟ್ಟಿತನದಿಂದ ಇರದೆ ಕಾದಂಬರಿಯ ಮೊನಚು ಹಗುರವಾಗಿ ಬಿಡುತ್ತದೆ. ಪರಿಶಿಷ್ಟ ಭಾಷೆಯ ಹರಿತ ಮತ್ತು ಗ್ರಾಮೀಣ ಭಾಷೆಯ ಭಾವಶಕ್ತಿಯನ್ನು ಕುರಿತು ಜಿ.ಪಿ. ಬಸವರಾಜು ಈ ಕಾದಂಬರಿಯ ಒಳಗೆ ವಿವೇಚಿಸುತ್ತಾರೆ. ಹೀಗೆ

ವಿವೇಚಿಸುವಾಗ ಸಾಮಾನ್ಯವಾಗಿ ಎಲ್ಲಾ ಕಾದಂಬರಿಗಳು ಈ ರೀತಿಯ ಭಾಷೆಯಿಂದಲೇ ರಚಿತವಾಗಬೇಕೆಂಬ ಧೋರಣೆಯು ಇವರಲ್ಲಿದೆ.

ಕೃತಿಯೊಳಗಿನ ಸಾಮಾಜಿಕ ಆಯಾಮ ಹಾಗೂ ಅಲ್ಲಿನ ಸಮೃದ್ಧತೆಯನ್ನು ಕೆಲವು ಸಂಗತಿಗಳೊಂದಿಗೆ ಜಿ.ಪಿ. ಬಸವರಾಜ ಅವರು ವಿವರಿಸುತ್ತಾರೆ. ಸಾಮಾಜಿಕ ಸ್ತರ ವಿನ್ಯಾಸದಲ್ಲಿ ವ್ಯಕ್ತಿಯ ಅಸ್ತಿತ್ವದ ಪ್ರಶ್ನೆಯಾಗಿ ಕಾಮವು ಎದುರುಗೊಳ್ಳುತ್ತದೆ. ಲಕ್ಕ, ರುಕ್ಮಿಣಿ, ಕೃಷ್ಣಶಾಸ್ತ್ರಿ ಎಂಬ ತ್ರಿಕೋನ ಕಾಮುಕ ಚಕ್ರಗಳು ಕೀಲು ಕಳೆದುಕೊಂಡು ದಿಕ್ಕಾಪಾಲಾಗಿ ಓಡಿ ಬೀಳುವುದನ್ನು ಈ ಕಾದಂಬರಿಯ ಮೂಲಕ ಜಿ.ಪಿ. ಬಸವರಾಜು ಅವರು ಗ್ರಹಿಸುತ್ತಾರೆ. ಆದರೆ ನಾಯಕರ ವಿಮರ್ಶೆ ಕೃತಿಯ ಸಾಹಿತ್ಯಿಕ ಅಂಶಗಳ ಕಡೆಗೆ ಹೆಚ್ಚು ಒಗ್ಗಿಕೊಳ್ಳುತ್ತದೆ. ನಾಯಕರು ಈ ಕಾದಂಬರಿಯ ತಂತ್ರ, ಭಾಷೆ, ಸಂವಿಧಾನ, ಶಿಲ್ಪ, ಪ್ರತಿಮೆ, ಸಂಕೇತಗಳ ಅರ್ಥ ವಿವರಣೆಯನ್ನು ಕಾದಂಬರಿಕಾರ ಹೇಗೆ ಬಳಸಿಕೊಂಡಿದ್ದಾರೆಂದು ಹುಡುಕುತ್ತಾರೆ. ಆದರೆ ಕೃತಿಯ ಸಾಮಾಜಿಕ ಆಯಾಮಗಳ ವಿವರಗಳತ್ತ ಅವರು ಹೆಚ್ಚು ಒತ್ತು ಕೊಡುವುದಿಲ್ಲ. ನಾಯಕರು ಕಾದಂಬರಿಯ ವಿವರದತ್ತ ತಮ್ಮ ವಿಮರ್ಶೆಯನ್ನು ತೊಡಗಿಸುವುದಿಲ್ಲ. ಆದರೆ ಜಿ.ಪಿ. ಬಸವರಾಜು ಅವರು ವಿಮರ್ಶಿಸುವಾಗ ಕಥೆಯ ವಿವರಣೆಯನ್ನು ಕೊಡುತ್ತಾರೆ.

ಬಸವರಾಜುರವರು 'ವೈಶಾಖ'ವನ್ನು 'ಮೈಶಾಖ'ಎಂದು ತಮಾಷೆ ಮಾಡುತ್ತಾರೆ. ಈ ಕಾದಂಬರಿಯಲ್ಲಿ ವಿಪರೀತ ಕಾಮಕೇಳಿಯ ಹಾವಳಿ ಬರುವುದರಿಂದ ಈ ಮಾತು ಬಂದಂತಿದೆ. ಹಳ್ಳಿಯ ಪರಿಸರದಲ್ಲಿ ಇದು ಸಾಮಾನ್ಯ ಸಂಗತಿಯಾಗಿದ್ದರೂ ಕ್ರೌರ್ಯವನ್ನು ಒಡ್ಡಬಲ್ಲದು. ಹೀಗೆ ನಾಯಕರು ಕೂಡ "ಈ ಲೈಂಗಿಕ ವಿವರಗಳಿಗೆ ಸಂಬಂಧಿಸಿದಂತೆ ಯೋಚಿಸಿದಾಗ ಊರಿನ ಬಂಜೆತನವನ್ನು ಧ್ವನಿಸುತ್ತಿರುವುದರ ಜೊತೆಗೆ ಆ ಊರಿನ ಕೆಡುಕ (Evil)ನ್ನು, ಕ್ರೌರ್ಯವನ್ನು ಅದು ಧ್ವನಿಸುತ್ತಿರುವುದರ ಅನುಭವ ಓದುಗನಿಗಾಗುವಂತಿದೆ. ಬರವಣಿಗೆಯಲ್ಲಿ ಕಾದಂಬರಿಕಾರನಾಗಲಿ, ಪಾತ್ರಗಳಾಗಲಿ ಉಪದೇಶ ರೂಪದಲ್ಲಿ ಬಾಯ್ಬಿಟ್ಟು ವ್ಯಾಖ್ಯಾನ ಮಾಡುತ್ತ ಹೋಗುವ ಕ್ರಮ ಮುಖ್ಯವಾಗಿ ಇಲ್ಲವಾದ್ದರಿಂದ ಕೆಲವು ಸಂಗತಿಗಳು, ಘಟನೆಗಳು, ಅನುರಣನಗಳನ್ನು, ಧ್ವನಿ ತರಂಗಗಳನ್ನು ಮೆಲುದನಿಯಲ್ಲಿ ಹೊಮ್ಮಿಸುತ್ತ ಹೋಗುತ್ತವೆ. ಅವು ತಾನು ಪ್ರತಿಮೆ, ತಾನು ಸಂಕೇತ, ತಾನು ಧ್ವನಿ ಎಂದು ದೊಡ್ಡ ದನಿಯಲ್ಲಿ ನಮ್ಮ ಮೇಲೆ ಅವುಚಿಕೊಳ್ಳುವ ರೀತಿಯಲ್ಲಿ ಬರುವುದಿಲ್ಲ.[೫೫]" ಎಂದು ಹೇಳುತ್ತಾರೆ. ಈ ಮೂಲಕ ಚದುರಂಗರ ಕಾದಂಬರಿಯಲ್ಲಿನ ಲೈಂಗಿಕ ಕ್ರೌರ್ಯವನ್ನು, ಕಾದಂಬರಿಯ ಕಥನ ವಿನ್ಯಾಸದ ಮಾದರಿಗಳನ್ನು ಅವರು ವಿಶ್ಲೇಷಿಸುತ್ತಾರೆ. ಓದುಗನಿಗೆ ಆಗುವ ಅನುಭವ ಸಾಧ್ಯತೆಯನ್ನು ವ್ಯಕ್ತಪಡಿಸುತ್ತಾರೆ.

ಜಿ.ಪಿ. ಬಸವರಾಜು ಅವರು ಸಾಮಾಜಿಕ ಆಯಾಮಗಳನ್ನು ಕೃತಿಯಲ್ಲಿ ಗುರುತಿಸುತ್ತಾರೆ. ನಾಯಕರು ಕಥನ ವಿವರಗಳನ್ನು ಅಂತರ್ಗತ ಮಾಡಿಕೊಂಡು ಸಾಹಿತ್ಯಿಕ ಅಂಶಗಳಿಂದ ವಿಶ್ಲೇಷಿಸುತ್ತಾರೆ. ಆದರೆ ಈ ಇಬ್ಬರೂ ವಿಮರ್ಶಕರು ಚದುರಂಗರ ಅನುಭವ, ಅಭಿವ್ಯಕ್ತಿಯನ್ನು ಕುರಿತು ವಿಮರ್ಶಿಸುತ್ತಾರೆ. ಭಾಷೆಯ ಸ್ವರೂಪ, ತಂತ್ರಗಾರಿಕೆ ಇವು ಅವರಿಗೆ ಮುಖ್ಯವಾಗಿ ಕಾಣುತ್ತವೆ. ಸಾಮಾಜಿಕ ಆಯಾಮಗಳು ಸೂಕ್ಷ್ಮವಾಗಿ ನಾಯಕರಲ್ಲಿ ಕಂಡುಬರುತ್ತವೆ. ಜಿ.ಪಿ. ಬಸವರಾಜು ಅವರ ವಿಮರ್ಶೆಯಲ್ಲಿ ಕಾದಂಬರಿಯ ಸಾಮಾಜಿಕ ಮತ್ತು ಸಾಹಿತ್ಯಿಕ ಎಂಬ ಎರಡು ಜಗತ್ತುಗಳು ಕಾಣುತ್ತವೆ.

## ಟಿಪ್ಪಣಿಗಳು:

೧. ನಾಯಕ ಜಿ.ಎಚ್, 'ನಿರಪೇಕ್ಷ', ಪುಟ-೧೭೬

೨. ಅನಂತಮೂರ್ತಿ ಯು.ಆರ್, 'ಪ್ರಜ್ಞೆ ಮತ್ತು ಪರಿಸರ', ಪುಟ-೧೧೪

೩. ಅದೇ, ಪುಟ-೧೧೪

೪. ನಾಯಕ.ಜಿ.ಎಚ್, 'ನಿರಪೇಕ್ಷ', ಪುಟ-೧೯೮

೫. ಅದೇ, ಪುಟ -೧೯೯

ಅಧ್ಯಾಯ: ೭.

# ಸಮಾರೋಪ

೭.೧. ಫಲಿತಗಳು

೭.೨. ಹೆಚ್ಚಿನ ಅಧ್ಯಯನದ ಸಾಧ್ಯತೆಗಳು

ಸುಮಾರು ನಾಲ್ಕು ದಶಕಗಳಿಂದ ಕನ್ನಡ ಸಾಹಿತ್ಯ ವಿಮರ್ಶೆಯನ್ನು ಮಾಡುತ್ತ ಬಂದಿರುವ ಜಿ.ಎಚ್. ನಾಯಕರು ಪ್ರಾಚೀನ ಮತ್ತು ಆಧುನಿಕ ಸಾಹಿತ್ಯ ಕೃತಿಗಳಿಗೆ ನವ್ಯ ವಿಮರ್ಶೆಯ ದೃಷ್ಟಿಕೋನದಿಂದ ಪ್ರತಿಕ್ರಿಯಿಸುತ್ತ ಬಂದ ವಿಮರ್ಶಕರಲ್ಲಿ ಒಬ್ಬರು. ಹೀಗೆ ತಮ್ಮ ಕಾಲದ ಮತ್ತು ನಂತರ ಕಾಲದ ವಿಮರ್ಶೆಯ ಎಲ್ಲ ನಿಲುವುಗಳು ಇವರಲ್ಲಿ ಬಳಕೆಯಾಗಿವೆ. ಲೇಖಕರ ಸಮಾಜದ ಕೇಂದ್ರದಲ್ಲಿಯೇ ಬದುಕುತ್ತಿರುವುದರಿಂದ ತಮ್ಮ ಕಾಲದ ಮನೋಧರ್ಮ ದವರಿಗಾಗಿಯೇ ವಿಮರ್ಶೆಯ ತಾತ್ವಿಕ ಸ್ವರೂಪವನ್ನು ರೂಪಿಸುವುದರಿಂದ ಅದು ಆ ಕಾಲಕ್ಕೆ ಒಳಗಾಗುತ್ತದೆ. ಅಥವಾ ಆ ಯುಗದ ಮನೋಧರ್ಮ ಸಹಜವಾಗಿಯೇ ಅವರ ಮೇಲೆ ಪ್ರಭಾವ ಬೀರಿರುತ್ತದೆ. ಇದು ಸಾಮಾನ್ಯವಾಗಿ ನವ್ಯ ವಿಮರ್ಶೆಯ ವಿಮರ್ಶಕರ ಮೇಲೂ ಪ್ರಭಾವಿಸಿದೆ. ಆದರೆ ನವ್ಯ ವಿಮರ್ಶೆಯನ್ನು ಕೃತಿ ರೂಪಿಸಿದ ಪರಿಸರಕ್ಕಿಂತ ಕೃತಿಯ ಒಳ ಬಂಧದ ಬಗ್ಗೆ ಮಹತ್ವ ಕೊಡುತ್ತದೆ. ಈ ಧೋರಣೆ ಕನ್ನಡ ಸಾಹಿತ್ಯ ವಿಮರ್ಶೆಯ ನವ್ಯ ಕಾಲಘಟ್ಟದ್ದು ಕೂಡ ಆಗಿತ್ತು. ಈ ಕಾಲದಲ್ಲಿ ಹಾಯ್ದು ಬಂದ ಜಿ.ಎಚ್.ನಾಯಕರು ನವ್ಯ ವಿಮರ್ಶೆಯ ನೆಲೆಯಲ್ಲಿಯೇ ಸಾಹಿತ್ಯ ಕೃತಿಗಳನ್ನು ಅವಲೋಕಿಸಿರುವುದನ್ನು ಇದುವರೆಗಿನ ಅಧ್ಯಯನ ತೋರಿಸಿದೆ.

## ೭.೧ ಫಲಿತಗಳು:

೧. ಜಿ.ಎಚ್. ನಾಯಕರು ಪಾಶ್ಚಾತ್ಯ ನವ್ಯ ವಿಮರ್ಶೆಯ ಪ್ರಭಾವಕ್ಕೆ ಒಳಗಾಗುತ್ತಾರೆ. ಅವರಲ್ಲಿ ಎಫ್.ಆರ್. ಲೀವೀಸ್ ಅನುಸರಿಸುವ ವಿಮರ್ಶಾ ಮಾದರಿಯ ಲಕ್ಷಣವಿದೆ. ಆದರೆ ನಾಯಕರು ಈ ಮಾದರಿಯನ್ನು ಕನ್ನಡ ಸಾಹಿತ್ಯ ಪರಂಪರೆಯ ಹಿನ್ನೆಲೆಯಲ್ಲಿ ಅನುಲಕ್ಷಿಸಿ ವಿಮರ್ಶಿಸುತ್ತಾರೆ.

೨. ಜಿ.ಎಚ್. ನಾಯಕರು ಕನ್ನಡ ಸಾಹಿತ್ಯ ಕೃತಿಗಳನ್ನು ನವ್ಯ ಸಾಹಿತ್ಯ ವಿಮರ್ಶೆಯ ದೃಷ್ಟಿಕೋನಗಳಿಂದ ವಿಮರ್ಶಿಸುತ್ತಾರೆ. ಅವರು ಪ್ರಾಚೀನ ಸಾಹಿತ್ಯ, ನವೋದಯ ಸಾಹಿತ್ಯ ಮತ್ತು ನವ್ಯೋತ್ತರ ಸಾಹಿತ್ಯವನ್ನು ಅವಲೋಕಿಸುವಾಗ ನವ್ಯ ವಿಮರ್ಶೆಯ ವಿಧಾನಗಳನ್ನೇ ಕೇಂದ್ರೀಕರಿಸಿಕೊಂಡು ವಿಮರ್ಶಿಸುತ್ತಾರೆ.

೩. ಜಿ.ಎಚ್. ನಾಯಕರ ವಿಮರ್ಶೆಯಲ್ಲಿ ಪಾಶ್ಚಾತ್ಯ ನವ್ಯ ವಿಮರ್ಶೆಯ ಮೂಲಭೂತ ತಾತ್ವಿಕ ನೆಲೆಯಿದೆ. ಆದರೆ ನಾಯಕರು ಪಾಶ್ಚಾತ್ಯ ವಿಮರ್ಶೆಯ ಪರಿಕಲ್ಪನೆಗಳನ್ನು ಮತ್ತು ಅಲ್ಲಿನ ವಿಮರ್ಶಕರನ್ನು ತಮ್ಮ ವಿಮರ್ಶೆಯ ವಿಶ್ಲೇಷಣೆಯ ಒಳಗಡೆ ಸೇರಿಸಿಕೊಂಡು ವಿಮರ್ಶಿಸುವುದಿಲ್ಲ. ಕನ್ನಡ ಸಾಹಿತ್ಯದ ಸಂಪ್ರದಾಯ ಮತ್ತು ಪರಂಪರೆಯೊಳಗೆ ತಮ್ಮದೇ ಆದ ವಿಮರ್ಶಾ ಮಾರ್ಗಗಳನ್ನು ಅವರು ಹುಡುಕಿಕೊಳ್ಳುತ್ತಾರೆ.

೪. ನವ್ಯ ವಿಮರ್ಶೆಯ ಕೆಲವು ತತ್ವ ಸಿದ್ಧಾಂತಗಳು ಉಲ್ಕಾಪಾತವಾಗಿ ಬಿದ್ದ ನಿಲುವುಗಳಾಗಿವೆ. ನವ್ಯ ಸಾಹಿತ್ಯ ವಿಮರ್ಶೆಯು ಭಾಷೆ, ವಸ್ತು, ಅನುಭವ, ಅಭಿವ್ಯಕ್ತಿ, ಸೃಜನಶೀಲತೆ, ಶಿಲ್ಪ, ಬಂಧ, ತಂತ್ರಗಳ ಬಗ್ಗೆಯೇ ಮಾತನಾಡುತ್ತದೆ. ಆದರೆ ಸಾಮಾಜಿಕ ಅನನ್ಯತೆಯ ಬಗ್ಗೆ ಮಾತನಾಡಲು ಸಾಧ್ಯತೆ ಮಾಡಿಕೊಳ್ಳುವುದಿಲ್ಲ. ಆದ್ದರಿಂದ ಇದೊಂದು ಏಕಮುಖತೆಯ ವಿಮರ್ಶೆಯೆಂದು ಅನಿಸುತ್ತದೆ. ಈ ಹಿನ್ನೆಲೆಯಲ್ಲಿ ನಾಯಕರ ವಿಮರ್ಶೆಯು ಈ ಪರಿಮಿತಿಯನ್ನು ದಾಟಲು ಯತ್ನಿಸುತ್ತದೆ.

೫. ನವ್ಯದ ವಿಮರ್ಶೆಯು ತುಂಬಾ ಬಿಗಿಯಾಗಿದ್ದು ನವ್ಯ ಪರಿಭಾಷೆಗಳು ಮಿತಿ ಮೀರಿ ಬಳಕೆಯಾಗಿವೆ. ಈ ಭಾಷೆಯ ಬಿಗಿ ಕೃತಿ ವಿವರಣೆಯ ಸಂದರ್ಭದಲ್ಲಿ ಗಾಢವಾಗಿ ಬರುವುದರಿಂದ ಅದನ್ನು ಓದುಗರು ಅರ್ಥೈಸಿಕೊಳ್ಳುವ ಸಂದರ್ಭದಲ್ಲಿ ತುಂಬ ತೊಡಕಾಗುತ್ತದೆ. ಈ ತೊಡಕು ಜಿ.ಎಚ್. ನಾಯಕರ ವಿಮರ್ಶೆಯಲ್ಲು ಕಾಣುತ್ತದೆ.

೬. ನಾಯಕರಿಗೆ ನವ್ಯ ಸಾಹಿತ್ಯದ ಪ್ರಭಾವ ಅಗಾಧವಾಗಿ ಆಗಿದೆ. ಆದ್ದರಿಂದ ಕುವೆಂಪು, ಬೇಂದ್ರೆಯವರ ಕಾವ್ಯಕ್ಕಿಂತಲೂ ಗೋಪಾಲಕೃಷ್ಣಅಡಿಗರ ಕಾವ್ಯವೇ ಶ್ರೇಷ್ಠ ಕಾವ್ಯವೆಂದು ಹೇಳುತ್ತಾರೆ. ಇದನ್ನು ಅವರು ನವ್ಯದ ಮೇಲಿನ ಅತಿಯಾದ ಒಲವಿನಿಂದ ಹೇಳುತ್ತಾರೆಂಬುದು ಸತ್ಯವೆನಿಸುತ್ತದೆ.

೭. ಜಿ.ಎಚ್. ನಾಯಕರು ಕೃತಿಯೊಂದರ ಮೌಲ್ಯನಿರ್ಣಯ ಮಾಡುವಾಗ ಪಾಶ್ಚಾತ್ಯ ಸಿದ್ಧಾಂತಗಳನ್ನು ಗಣನೆಗೆ ತೆಗೆದುಕೊಳ್ಳುತ್ತಾರೆ. ಆದರೂ ಅವುಗಳನ್ನು ಮುಖ್ಯವಾಗಿ ಪರಿಗಣಿಸುವುದಿಲ್ಲ. ನಾಯಕರು ಕೃತಿಯೊಂದನ್ನು ವಿಮರ್ಶಿಸುವಾಗ ಕನ್ನಡ ಸಾಹಿತ್ಯ ಪರಂಪರೆಯನ್ನು ಅವಲೋಕಿಸಿ ಮೌಲ್ಯಮಾಪನ ಮಾಡುತ್ತಾರೆ. ಇದು ಇವರ ವಿಶೇಷತೆಯಾಗಿದೆ.

೮. ಪಾಶ್ಚಾತ್ಯ ವಿಮರ್ಶಾ ಮಾದರಿಯನ್ನು ಅನುಸರಿಸಿದವರೆಂದರೆ ಯು.ಆರ್.ಅನಂತಮೂರ್ತಿ, ಎಂ.ಜಿ. ಕೃಷ್ಣಮೂರ್ತಿ, ಎಚ್.ಎಂ. ಚನ್ನಯ್ಯ ಹಾಗೂ ಜಿ.ಎಚ್. ನಾಯಕರು. ಈ ಸಮಕಾಲೀನ ವಿಮರ್ಶಕರಲ್ಲಿ ಜಿ.ಎಚ್. ನಾಯಕರು ವಿಭಿನ್ನವಾಗಿ ಕಂಡುಬರುತ್ತಾರೆ. ಉಳಿದವರಂತೆ ಜಿ.ಎಚ್. ನಾಯಕರು  ಪಾಶ್ಚಾತ್ಯ ವಿಮರ್ಶೆಯನ್ನು ಯಥಾವತ್ತಾಗಿ ಪಾಲಿಸುವುದಿಲ್ಲ ಮತ್ತು ಕನ್ನಡ ಸಾಹಿತ್ಯದ ಕೃತಿಯೊಂದನ್ನು ವಿಮರ್ಶಿಸುವಾಗ ಪಾಶ್ಚಾತ್ಯ ಸಾಹಿತ್ಯ ಪರಂಪರೆಯನ್ನು ಅನುಸರಿಸುವುದಿಲ್ಲ.

೯. ಜಿ.ಎಚ್. ನಾಯಕರ ವಿಮರ್ಶೆಯಲ್ಲಿ ಕೃತಿನಿಷ್ಠ ವಿಮರ್ಶೆ ಮಾತ್ರವಲ್ಲದೆ ಚಾರಿತ್ರಿಕ ಮತ್ತು ಸಂಸ್ಕೃತಿ ನಿಷ್ಠ ವಿಮರ್ಶೆ ಕಂಡುಬರುತ್ತದೆ. ಕನ್ನಡ ಸಾಹಿತ್ಯದಲ್ಲಿ ಈಗ ಜಾರಿಯಲ್ಲಿರುವ ಸಂಸ್ಕೃತಿನಿಷ್ಠ ವಿಮರ್ಶೆಯ ಸಂದರ್ಭದಲ್ಲಿ ಜಿ.ಎಚ್. ನಾಯಕರು ಅನುಸರಿಸಿದ ವಿಮರ್ಶೆಯ ತಾತ್ವಿಕ ನಿಲುವುಗಳು ಅಥವಾ ಮೌಲ್ಯನಿರ್ಣಯ ವಿಧಾನಗಳು ಎಷ್ಟು ಅರ್ಥಪೂರ್ಣವಾಗಿವೆ? ವಿಮರ್ಶಾ ವಿಧಾನಗಳೇ ಪಲ್ಲಟಗೊಳ್ಳುತ್ತಿರುವ ಇಂದಿನ ಸಂದರ್ಭದಲ್ಲಿ ಅವರ ವಿಮರ್ಶಾ ಮಾದರಿ ಅಗತ್ಯವೇ? ಎನ್ನುವ

ಪ್ರಶ್ನೆಗಳನ್ನು ಹಾಕಿಕೊಂಡರು ಸಹ ಜಿ.ಎಚ್. ನಾಯಕರು ಒಟ್ಟು ಕನ್ನಡ ಸಾಹಿತ್ಯ ವಿಮರ್ಶಾ ಪರಂಪರೆಯಲ್ಲಿ ಬಹುಮುಖ್ಯ ವಿಮರ್ಶಕರಾಗಿ ಕಾಣುತ್ತಾರೆ.

೧೦. ಜಿ.ಎಚ್. ನಾಯಕರು ಅನುಸರಿಸಿದ ವಿಮರ್ಶಾ ಮಾದರಿಗಳು ಸೃಜನಶೀಲ ಬರಹಗಾರರಿಗೆ ಮಾರ್ಗದರ್ಶನ ನೀಡುವಂತಿವೆ. ಕೃತಿಯ ಒಳಗಡೆ ದೊರೆಯಬಹುದಾದ ಆಧಾರಗಳ ಮುಖೇನವಾಗಿ ವಿಮರ್ಶೆ ಸಾಗುತ್ತದೆ. ಇದರಿಂದಾಗಿ ಕೃತಿಯ ಹೊರ ಜಗತ್ತಿನ ಬಗ್ಗೆ ಗಂಭೀರವಾಗಿ ನಾಯಕರು ವಿಮರ್ಶಿಸುವುದಿಲ್ಲ. ಆದ್ದರಿಂದ ನಾಯಕರ ವಿಮರ್ಶೆ ಕೇವಲ ಕೃತಿನಿಷ್ಠವಾಗಿರುತ್ತದೆ.

## ೭.೨ ಹೆಚ್ಚಿನ ಅಧ್ಯಯನದ ಸಾಧ್ಯತೆಗಳು

ಯಾವುದೇ ವಿಷಯದ ಅಧ್ಯಯನಕ್ಕೆ ಕೊನೆಯೆಂಬುದು ಇರುವುದಿಲ್ಲ. ಅಧ್ಯಯನವೊಂದು ಕೊನೆಗೊಂಡ ಹಾಗೇ ಮತ್ತೆ ಹೊಸ ರೀತಿಯ ಆಲೋಚನೆಗಳು ಉಗಮಗೊಳ್ಳುತ್ತವೆ. ಮುಂದೆ ಅಧ್ಯಯನವನ್ನು ಮುಂದುವರೆಸಲಿಕ್ಕೆ ಅವಕಾಶವು ಇರುತ್ತದೆ. "ಜಿ.ಎಚ್. ನಾಯಕರ ವಿಮರ್ಶೆ: ತಾತ್ವಿಕ ನೆಲೆಗಳು" ಈ ಅಧ್ಯಯನವು ಮುಗಿದ ಮೇಲೂ ಇನ್ನೂ ಅಧ್ಯಯನ ಮಾಡುವುದಕ್ಕೆ ಹೆಚ್ಚಿನ ಸಾಧ್ಯತೆಗಳು ಉಳಿದಿವೆ.

೧. ಕನ್ನಡದ ನವ್ಯ ವಿಮರ್ಶೆಯಯ ಪ್ರಮುಖರಲ್ಲಿ ಜಿ.ಎಚ್. ನಾಯಕರು ಒಬ್ಬರು. ಯು.ಆರ್. ಅನಂತಮೂರ್ತಿ, ಎಂ.ಜಿ. ಕೃಷ್ಣಮೂರ್ತಿ ಇವರ ಸಮಕಾಲೀನರು. ಆದ್ದರಿಂದ ಈ ಮೂವರು ವಿಮರ್ಶಕರ ವಿಮರ್ಶೆಯ ನಿಲುವುಗಳನ್ನು ತೌಲನಿಕ ಅಧ್ಯಯನಕ್ಕೆ ಒಳಪಡಿಸಬಹುದು. ಇವರ ವಿಮರ್ಶಾ ನೆಲೆಗಳ ತಾತ್ವಿಕ ಅಧ್ಯಯನ ಮಾಡಬಹುದು. ಇದರಿಂದಾಗಿ ನವ್ಯ ವಿಮರ್ಶೆಯ ಅಗ್ರಪಂಕ್ತಿಯಲ್ಲಿ ಬರುವ ಇವರಲ್ಲಿ ವಿಮರ್ಶೆ ತಾತ್ವಿಕ ಚೌಕಟ್ಟು ಮತ್ತು ವಿಮರ್ಶೆ ಭಿನ್ನತೆಗಳು ದೊರಕಬಹುದು.

೨. ಜಿ.ಎಚ್. ನಾಯಕರು 'ಸಕಾಲಿಕ' ಕೃತಿಯಿಂದ ಮುಂದೆ ವೈಚಾರಿಕ, ರಾಜಕೀಯ, ಸಾಮಾಜಿಕ ಬರಹಗಳಲ್ಲಿ ತೊಡಗಿಕೊಂಡರು. ಅದ್ದರಿಂದ ಸಾಹಿತ್ಯ ವಿಮರ್ಶೆಯ ವ್ಯಾಪ್ತಿಯಲ್ಲಿ ಬಾರದ ಅವರ ಬರಹಗಳು ಪ್ರತ್ಯೇಕವಾದ ಅಧ್ಯಯನ ಮಾಡುವ ಸಾಧ್ಯತೆಯೂ ಇದೆ.

೩. ಪಾಶ್ಚಾತ್ಯ ನವ್ಯ ವಿಮರ್ಶೆ ನಿಲುವುಗಳಿಗೂ ಮತ್ತು ಜಿ.ಎಚ್. ನಾಯಕರ ವಿಮರ್ಶೆಯ ನಿಲುವುಗಳಿಗೂ ಇರುವ ಅಂತರ್‌ಸಂಬಂಧಗಳನ್ನು ನಿರ್ದಿಷ್ಟ ಬರಹಗಳನ್ನು ಇಟ್ಟುಕೊಂಡು ಅಧ್ಯಯನ ಮಾಡಬಹುದಾಗಿದೆ.

೪. ಜಿ.ಎಚ್.ನಾಯಕರು ಮತ್ತು ಆಧುನಿಕ ವಿಮರ್ಶೆ ಪರಂಪರೆಯನ್ನೇ ಕೇಂದ್ರವಾಗಿರಿಸಿಕೊಂಡು ಅಧ್ಯಯನ ಮಾಡುವ ಸಾಧ್ಯತೆಯಿದೆ.

ಒಟ್ಟಿನಲ್ಲಿ ನಾಯಕರ ವಿಮರ್ಶೆಯ ನಿರ್ಣಯಗಳಲ್ಲಿ ದ್ವಂದ್ವವಿಲ್ಲದೆ ಮೌಲ್ಯಮಾಪನ ಮಾಡುವ ಕ್ರಮ ಮೆಚ್ಚುವಂತಹದ್ದು. ಸಾಹಿತ್ಯ ಕೃತಿಗಳ ಮತ್ತು ಕವಿಗಳ ಶ್ರೇಷ್ಠತೆಯ ಬಗ್ಗೆ ಮಾತನಾಡುವ ನಾಯಕರ ಬಗೆಗೆ ಅಧ್ಯಯನ ಮತ್ತು ವಿಮರ್ಶೆ ನಡೆಯದಿರುವುದು ಕೂಡ ಇವರ ವಿಮರ್ಶೆಯಲ್ಲಿ ಜಿಜ್ಞಾಸೆ ಇಲ್ಲ ಎಂಬುದನ್ನೆ ಸಾಬೀತು ಪಡಿಸುತ್ತದೆ. ಅಂತಿಮವಾಗಿ ಕೂಡ ಅವರ ವಿಮರ್ಶೆ ಕುತೂಹಲಗಳನ್ನು ಶ್ರೇಷ್ಠತೆಗಳನ್ನು ಕುರಿತು ಎಲ್ಲವನ್ನು ಈ ಸಂದರ್ಭದಲ್ಲಿ ನಿರ್ಣಯಿಸಲಿಕ್ಕೆ ಆಗುವುದಿಲ್ಲ. ಪ್ರಸ್ತುತ ಸಂದರ್ಭದಲ್ಲಿ ಅವರ ವಿಮರ್ಶೆ ಬಗ್ಗೆ ಇನ್ನೂ ಕೆಲಸ ಆಗಬೇಕಾದ ಅನಿವಾರ್ಯತೆ ಇದೆ.

## -: ಅಭ್ಯಾಸ ಸೂಚಿ:-


ಅನಂತಮೂರ್ತಿ ಯು.ಆರ್, ೧೯೭೬, 'ಪ್ರಜ್ಞೆ ಮತ್ತು ಪರಿಸರ', ಅಕ್ಷರ ಪ್ರಕಾಶನ, ಹೆಗ್ಗೋಡು

ಅನಂತಮೂರ್ತಿ. ಯು.ಆರ್, ೧೯೯೨, 'ಸನ್ನಿವೇಶ', ಅಕ್ಷರ ಪ್ರಕಾಶನ, ಹೆಗ್ಗೋಡು

ಅರವಿಂದ ಮೂಲಗತ್ತಿ, ೨೦೦೪, 'ಕನ್ನಡ ವಿಮರ್ಶೆಯ ಮಾರ್ಗ'(ಸಂ), ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

ಅಶೋಕ. ಟಿ. ಪಿ, ೧೯೯೩, 'ಪುಸ್ತಕ ಪ್ರೀತಿ', ಅಕ್ಷರ ಪ್ರಕಾಶನ, ಹೆಗ್ಗೋಡು

ಅಶೋಕ. ಟಿ.ಪಿ, ೧೯೯೧, 'ಸಾಹಿತ್ಯ ಸಂದರ್ಭ', ಅಕ್ಷರ ಪ್ರಕಾಶನ, ಹೆಗ್ಗೋಡು

ಅಶೋಕ. ಟಿ.ಪಿ, ೧೯೮೬ 'ಸಾಹಿತ್ಯ ಸಂಪರ್ಕ', ಅಕ್ಷರ ಪ್ರಕಾಶನ, ಹೆಗ್ಗೋಡು

ಕೀರ್ತಿನಾಥ ಕುರ್ತಕೋಟಿ, ೧೯೯೨, 'ಯುಗಧರ್ಮ ಮತ್ತು ಸಾಹಿತ್ಯದರ್ಶನ', ಮನೋಹರ ಗ್ರಂಥಮಾಲಾ, ಧಾರವಾಡ

ಕೃಷ್ಣಮೂರ್ತಿ.ಎಂ.ಜಿ. ೧೯೯೪ 'ಕೃತಿಸಂಸ್ಕೃತಿ', ರುಜುವಾತು ಪ್ರಕಾಶನ, ಮೈಸೂರು

ಕೇಶವಶರ್ಮ.ಕೆ, ೨೦೦೮, 'ಮಾರ್ಕ್ಸ್‌ವಾದಿ ಸಾಹಿತ್ಯ ವಿಮರ್ಶೆ', ಕನ್ನಡ ವಿಶ್ವವಿದ್ಯಾಲಯ, ಹಂಪಿ

ಗಿರಡ್ಡಿ ಗೋವಿಂದರಾಜ, ೨೦೦೨, 'ಓದುವ ದಾರಿಗಳು', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಗಿರಡ್ಡಿ ಗೋವಿಂದರಾಜ, ೧೯೭೪, 'ನವ್ಯವಿಮರ್ಶೆ', ಅಕ್ಷರ ಪ್ರಕಾಶನ, ಸಾಗರ

ಗಿರಡ್ಡಿ ಗೋವಿಂದರಾಜ, ೨೦೦೭, 'ಪ್ರಮಾಣು' ಕನ್ನಡ ವಿಶ್ವವಿದ್ಯಾಲಯ, ಹಂಪಿ

ಚಂದ್ರಶೇಖರ ಪಾಟೀಲ, ೧೯೯೩, ಪ್ರಗತಿಶೀಲ, ನವ್ಯ, ದಲಿತ, ಬಂಡಾಯ, ಸಂಕ್ರಮಣ ಸಾಹಿತ್ಯ, ಸಂಪುಟ-೨, ಸಂಕ್ರಮಣ ಪ್ರಕಾಶನ, ಧಾರವಾಡ

ದಾಮೋದರ ರಾವ್.ಬಿ, ೧೯೯೨, 'ಆಯಾಮಗಳು', ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ

ನರಹಳ್ಳಿ ಬಾಲಸುಬ್ರಹ್ಮಣ್ಯ, ೧೯೯೦, 'ನವ್ಯತೆ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ನಾಗರಾಜ. ಡಿ.ಆರ್, ೧೯೯೦ 'ಅಮೃತ ಮತ್ತು ಗರುಡ', ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

ನಾಗರಾಜ .ಡಿ.ಆರ್, ೧೯೯೯, 'ಅಲ್ಲಮ ಪ್ರಭು ಮತ್ತು ಶೈವ ಪ್ರತಿಭೆ', ಅಕ್ಷರ ಪ್ರಕಾಶನ ಹೆಗ್ಗೋಡು

ನಾಗರಾಜ. ಡಿ. ಆರ್, ೨೦೦೨, 'ಶಕ್ತಿಶಾರದೆಯ ಮೇಳ', ಅಕ್ಷರ ಪ್ರಕಾಶನ, ಹೆಗ್ಗೋಡು

ಬರಗೂರು ರಾಮಚಂದ್ರಪ್ಪ, ೨೦೦೧, 'ಸಂಸ್ಕೃತಿ: ಶ್ರಮ ಮತ್ತು ಸೃಜನ ಶೀಲತೆ', ಅಂಕಿತ ಪುಸ್ತಕ, ಬೆಂಗಳೂರು

ಬಸವರಾಜು.ಜಿ.ಪಿ, ೧೯೯೬, 'ಕಂಡಷ್ಟು' ಚೇತನ ಬುಕ್ ಹೌಸ್, ಮೈಸೂರು

ಬಸವರಾಜ ಕಲ್ಗುಡಿ, ೧೯೯೯, 'ನಕ್ಷೆ-ನಕ್ಷತ್ರ', ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು

ಭಂಡಾರಿ ಆರ್.ವಿ, ೨೦೦೫, 'ಒಳದನಿ' ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು

ಮಣಿಪಾಲ. ಆರ್ಕೆ, ೧೯೮೮, 'ವಿಮರ್ಶೆಯ ಸವಾಲು', ಸಂಕ್ರಮಣ ಪ್ರಕಾಶನ, ಧಾರವಾಡ

ಯರವಿನ ತೆಲಿಮಠ. ಸಿ.ಆರ್, ೨೦೦೦, 'ಪಾಶ್ಚಾತ್ಯ ಸಾಹಿತ್ಯ ವಾದಗಳು ಮತ್ತು ಕನ್ನಡ ಸಾಹಿತ್ಯ ಸಂದರ್ಭ', ಕನ್ನಡ ವಿಶ್ವವಿದ್ಯಾಲಯ, ಹಂಪಿ

ಯರವಿನ ತೆಲಿಮಠ. ಸಿ. ಆರ್, ೨೦೦೮, 'ಸಾಹಿತ್ಯ ವಿಮರ್ಶೆಯ ಮಾದರಿಗಳು', ಕನ್ನಡ ವಿಶ್ವವಿದ್ಯಾಲಯ, ಹಂಪಿ

ರಹಮತ್ ತರೀಕೆರೆ, ೨೦೦೮, 'ಸಾಂಸ್ಕೃತಿಕ ಅಧ್ಯಯನ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ರಾಜೇಂದ್ರ ಚೆನ್ನಿ, ೨೦೦೩, 'ಅಮೂರ್ತತೆ ಮತ್ತು ಪರಿಸರ', ಅಭಿನವ ಪ್ರಕಾಶನ, ಬೆಂಗಳೂರು

ರಾಮಚಂದ್ರನ್. ಸಿ.ಎನ್, ೨೦೦೮, 'ಸಾಹಿತ್ಯ ವಿಮರ್ಶೆ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ವಿಜಯಶಂಕರ. ಎಚ್.ಆರ್, ೨೦೦೪, 'ಒಳದನಿ', ಅಕ್ಷರ ಪ್ರಕಾಶನ, ಹೆಗ್ಗೋಡು

ವಿದ್ಯಾಶಂಕರ.ಎಸ್, ಹೆಗಡೆ. ಜಿ. ಎಂ, ೨೦೦೫, 'ಸಹೃದಯ ಸಂವಾದ'(ಸಂ), ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು

ಶಾಂತಿನಾಥ ದೇಸಾಯಿ, ೨೦೦೪, 'ನವ್ಯ ಸಾಹಿತ್ಯ ದರ್ಶನ', ಸ್ವಪ್ನ ಬುಕ್ ಹೌಸ್, ಬೆಂಗಳೂರು

ಶಿವರುದ್ರಪ್ಪ ಜಿ.ಎಸ್, ೨೦೦೮, 'ವಿಮರ್ಶೆಯ ಪೂರ್ವ ಪಶ್ಚಿಮ', ಸಾಹಿತ್ಯ ಭಂಡಾರ, ಬೆಂಗಳೂರು

ಶಿವರುದ್ರಪ್ಪ ಜಿ.ಎಸ್, ಲಕ್ಷ್ಮೀನಾರಾಯಣ ಭಟ್ಟ, ೧೯೭೧, 'ಪ್ರಾಯೋಗಿಕ ವಿಮರ್ಶೆ'(ಸಂ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ಶ್ರೀಮತಿ. ಎಚ್.ಎಸ್, ೧೯೯೩, 'ಹಳಗನ್ನಡ ಸಾಹಿತ್ಯಾಧ್ಯಯನ ಸಮೀಕ್ಷೆ', ಅಜಂತಾ ಪ್ರಕಾಶನ, ಹೊಸಪೇಟೆ

ಹೆಗಡೆ. ಜಿ.ಎಂ, 'ಗ್ರಂಥಸುಗಾತಿ', ರಾಘವೇಂದ್ರ ಪ್ರಕಾಶನ, ಅಂಕೋಲ,

